ಕರ್ನಾಟಕ

Vol - 12 March 2013 Issue No. 03 ₹ 5.00/-



# ಸ್ಕೌಟ್ ಮತ್ತು ಗೈಡ್ ವಾರ್ತಾಪತ್ರಿಕೆ



# Karnataka Scout & Guide

*News Magazine*





22 ಫೆಬ್ರವರಿ 2013 ರಂದು ಶಾಂತಿಗೃಹ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ಜರುಗಿದ "ಸ್ಥಾಪಕರ ದಿನಾಚರಣೆ" ಹಾಗೂ "ಚಿಂತನಾ ದಿನಾಚರಣೆ" ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಡಿ. ಬಸವರಾಜ್, ಕ.ಆ.ಸೇ., ನಿರ್ದೇಶಕರು (ಕಾರ್ಯಕ್ರಮ) ಸರ್ವಶಿಕ್ಷಣ ಅಭಿಯಾನ ಮತ್ತು ಡಾ. ಗೀತಾ ನ್ಯಾಮಗೌಡರ್, ಉಪನಿರ್ದೇಶಕರು, (ಶಿಶು ಆರೋಗ್ಯ) ಸಾರ್ವಜನಿಕ ಆರೋಗ್ಯ ಇಲಾಖೆ, ಇವರುಗಳು ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಸಂಸ್ಥೆಯ ಉಪಾಧ್ಯಕ್ಷಿಣಿ, ಶ್ರೀಮತಿ ಸರೋಜ ವಿ. ನಾಯ್ಡು ಹಾಗೂ ಇತರ ರಾಜ್ಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.




ದಿನಾಂಕ : 03 ರಿಂದ 05 ಮಾರ್ಚ್ 2013 ರ ವರೆಗೆ ಹಾಸನದಲ್ಲಿ ಜರುಗಿದ ಮೈಸೂರು ವಿಭಾಗ ಮಟ್ಟದ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳು, ಜಂಟಿ ಕಾರ್ಯದರ್ಶಿಗಳು, ಖಜಾಂಚಿಗಳು ಹಾಗೂ ಸಹಾಯಕ ಜಿಲ್ಲಾ ಆಯುಕ್ತರುಗಳ ಸಮಾವೇಶದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳೊಂದಿಗೆ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾ ಮುಖ್ಯ ಆಯುಕ್ತ ಡಾ. ವೈ. ಎಸ್. ವೀರಭದ್ರಪ್ಪ, ಶಿಕ್ಷಣಾಧಿಕಾರಿ ಶ್ರೀಮತಿ ಟಿ.ಆರ್. ಲತಾ ಹಾಗೂ ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾಣಬಹುದು.



23 ಫೆಬ್ರವರಿ 2013 ರಂದು ಉಡುಪಿ ಜಿಲ್ಲೆಯ ಕಲ್ಯಾಣಪುರಿ ಸ್ಥಳೀಯ ಸಂಸ್ಥೆ ಏರ್ಪಡಿಸಿದ್ದ ಸ್ಕೌಟ್-ಗೈಡ್ ಮೇಳದಲ್ಲಿ ಶ್ರೀಮತಿ ಶಾಂತಾ ವಿ. ಆಚಾರ್ಯ, ರಾಜ್ಯ ಆಯುಕ್ತರು (ಗೈಡ್ಸ್) ಮಾತನಾಡುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಹಾಸನದಲ್ಲಿ ಜರುಗಿದ ಮೈಸೂರು ವಿಭಾಗ ಮಟ್ಟದ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳ ಸಮಾವೇಶದಲ್ಲಿ ಶ್ರೀ ಜಿ.ಆರ್. ಬಸವರಾಜ್, ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾ ಮುಖ್ಯ ಆಯುಕ್ತ ಡಾ. ವೈ.ಎಸ್. ವೀರಭದ್ರಪ್ಪ, ಶಿಕ್ಷಣಾಧಿಕಾರಿ ಶ್ರೀಮತಿ ಟಿ.ಆರ್. ಲತಾ ಹಾಗೂ ಇತರ ರಾಜ್ಯ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ದಿನಾಂಕ 22 ಫೆಬ್ರವರಿ 2013 ರಂದು ಶಾಂತಿಗೃಹದಲ್ಲಿ ಜರುಗಿದ ಸ್ಥಾಪಕರ ದಿನಾಚರಣೆಯ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ ಶ್ರೀ ಡಿ. ಬಸವರಾಜ್, ಕ.ಆ.ಸೇ., ನಿರ್ದೇಶಕರು (ಕಾರ್ಯಕ್ರಮ) ಸರ್ವಶಿಕ್ಷಣ ಅಭಿಯಾನ ರವರು ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಹಸ್ತಲಾಘವ ನೀಡಿ ಸಂಭ್ರಮಿಸುತ್ತಿರುವುದು.





ಸ್ಥಾಪಕರ ದಿನಾಚರಣೆಯ ಸಂದರ್ಭದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳ ವಿಹಂಗಮ ನೋಟ.





ಇದೇ ಸಂದರ್ಭದಲ್ಲಿ ಏರ್ಪಡಿಸಿದ್ದ ಚಿತ್ರಕಲೆ ಸ್ಪರ್ಧೆಯಲ್ಲಿ ಭಾಗವಹಿಸಿದ್ದ ಪುಟಾಣಿಗಳು.

# *Editor's Desk.......*

*"In all of this, it is the spirit that matters. Our Scout law and Promise, when we really put them into practice, take away all occasion for wars and strife among nations" Lord Baden Powell*

*When Baden Powell said these words the world was passing through the passage of world wars and wars of freedom. Even after a century the quote is still significant with the same importance of Scout law and promise.*

*Today the world is witnessing different type of wars, wars for water/ boundaries/ power and empowering. In this context when we relate the Scout law and promise putting in to practice automatically we became "Messengers of peace". How well we are progressing all over the globe and we are breaking barriers to build bridges. The bridges we build are to cross hurdles among our relations/ ego's and bridges to cross the differences and say proudly "One World – One Promise".*

*The progress of Scouts/ Guides should be on the move and we are adults who make it possible. Then only we are a great movement and have to prove it, and to prove we have to walk with the trends and the trends are quite challenging. To face and accept the challenges we have to prepare ourselves along with our teams. The teams and its leaders should keep the values of our basics – law and promise, also with updated skills and creative/ innovative activities to prepare young brains to become "Messengers of peace" and they should also become self made rather than self centric. Further the youth of India are ahead in all fields of world and are we in our Scout/ Guide movement? Answer may be quite different, yes leaders says yes and no where we can see the youth from BS&G emerging anywhere.*

*Friends as BP said about the "In all of this, it is the spirit that matters. Our Scout law and Promise, when we really put them into practice, take away all occasion for wars and strife among nations" we should stop wars within ourselves and come out to spread peace and progress for better world. As the punch of the century goes "Scouts create a better world"*

M.A. KHALID
Editor

# ರಾಜ್ಯ ಮುಖ್ಯ ಆಯುಕ್ತರ ನುಡಿ.........................

ಆತ್ಮೀಯರೆ,

ನನ್ನ ಹಿಂದಿನ ಮೂರುತಿಂಗಳುಗಳ ಚಿಂತನೆಗಳಲ್ಲಿ ಪ್ರಮುಖವಾಗಿ ಪ್ರಸ್ತಾಪಿಸಿರುವ ವಿಷಯ-ಸ್ಕೌಟ್-ಗೈಡ್ ಚಳವಳಿಯಲ್ಲಿ ನಿಸ್ವಾರ್ಥ ಮನೋಭೂಮಿಕೆಯಿಂದ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಹಂತದ ನನ್ನ ಸಹೋದ್ಯೋಗಿಗಳು ಇನ್ನೂ ಹೆಚ್ಚು ಕ್ರಿಯಾಶೀಲರಾಗಬೇಕು ಎಂಬ ಮನದಾಳದ ಚಿಂತನೆ. ತಮ್ಮ ದಳ-ಘಟಕಗಳನ್ನು ಸಮಾಜಮುಖಿ ಹಾಗೂ ಹೆಚ್ಚು ಕ್ರಿಯಾತ್ಮಕಗೊಳಿಸಬೇಕು ಎಂಬುದೇ ನನ್ನ ಆಸೆ ಹಾಗೂ ಆಕಾಂಕ್ಷೆ, ಇದು ನಮ್ಮೆಲ್ಲರ ಸದಾಶಯವೂ ಹೌದು.

ಚಳವಳಿಯ ಉದಾತ್ತ ಧ್ಯೇಯ ಧೋರಣೆಗಳಿಗನುಗುಣವಾಗಿ ನಿಮ್ಮ ತಂಡದ ನಾಯಕ-ನಾಯಕಿಯಾಗಿ-ದಳದ ಸ್ಕೌಟ್ಸ್-ಗೈಡ್ಸ್,ಕಬ್ಸ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್‌ಗಳನ್ನು ಉತ್ತಮ ನಾಗರಿಕರನ್ನಾಗಿಸುವ ನಿಮ್ಮಗಳ ಪ್ರಮಾಣಿಕ ಪ್ರಯತ್ನ ಫಲಪ್ರದವಾಗಲಿ ಎಂದು ಆಶಿಸುತ್ತೇನೆ.

2012-2013ನೇ ವರ್ಷದ ಮುಕ್ತಾಯದಂಚಿನಲ್ಲಿದ್ದೇವೆ. ಈ ತಿಂಗಳಲ್ಲಿ ರಾಜ್ಯದ ಮೂರು ರಾಜ್ಯ ತರಬೇತಿ ಕೇಂದ್ರಗಳ ಅಭಿವೃದ್ಧಿ ಉಪಸಮಿತಿಗಳ ಸಭೆ-ಪ್ರಕಟಣೆಗಳ ಉಪಸಮಿತಿ-ಸ್ಕೌಟ್ಸ್-ಗೈಡ್ಸ್ ಉಪಸಮಿತಿಗಳ ಸಭೆಗಳು ಗೈಡ್ಸ್ ಪದಕ ಸಮಿತಿ ಸಭೆ-ಸಾಮಗ್ರಿ ಮಳಿಗೆ ಉಪಸಮಿತಿ ಸಭೆ, ಹಣಕಾಸು ಸಮಿತಿ ಹಾಗೂ ರಾಜ್ಯ ಕಾರ್ಯಕಾರಿ ಮಂಡಳಿಯ ಸಭೆಗಳು ಜರುಗಿದ್ದು ಈ ವರ್ಷದಲ್ಲಿ ಚಳವಳಿಗೆ ಸಂಬಂಧಿಸಿದ ಎಲ್ಲಾ ಅಂಕಿ - ಅಂಶಗಳ ಬಗ್ಗೆ ಕೂಲಂಕಷವಾಗಿ ವಿಚಾರವಿನಿಮಯ ಹಾಗೂ ವಿಮರ್ಶೆ ಮಾಡಿದ್ದು-ಮುಂದಿನ ವಾರ್ಷಿಕ 2013-14 ರ ಯೋಜನೇತರ ಹಾಗು ಯೋಜನಾ ವೆಚ್ಚಗಳ ಬಗ್ಗೆ ಸೂಕ್ತವಾಗಿ ಪರಿಶೀಲಿಸಿ ಚಳವಳಿಯ ಎಲ್ಲಾ ಹಂತಗಳ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್‌ಗಳ ಕಾರ್ಯಕ್ರಮಗಳ ಸಮರ್ಪಕ ಬೆಳವಣಿಗೆಗೆ ಬೇಕಾಗಬಹುದಾದ ಎಲ್ಲಾ ಅನುಕೂಲತೆಗಳನ್ನು ಒದಗಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದೇವೆ ಎಂಬ ಭವರಸೆ ನನಗಿದೆ. ಇದೆಲ್ಲವನ್ನು ಆಗುಮಾಡಲು ಸೂಕ್ತ-ಸಲಹೆ ಅಭಿಪ್ರಾಯ ಮಾರ್ಗದರ್ಶನ ನೀಡಿದ ಎಲ್ಲಾ ಉಪಸಮಿತಿಗಳ ಅಧ್ಯಕ್ಷರುಗಳಿಗೆ-ಸದಸ್ಯರುಗಳಿಗೆ - ಹಣ ಸಹಾಯ ನೀಡುವ ಮೂಲಕ ಚಳವಳಿಗೆ ಉತ್ತೇಜನ ನೀಡುತ್ತಿರುವ ರಾಜ್ಯ ಸರ್ಕಾರಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಹಾಗು ಸಂಸ್ಥೆಯ ಹಿತೈಷಿಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ನಮನಗಳು.

ನಿಮಗೆಲ್ಲರಿಗೂ ತಿಳಿದಿರುವಂತೆ ರಾಜ್ಯ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು 2011-2012ನೇ ಸಾಲಿನಲ್ಲಿ ನೀಡಿದ ಆದೇಶದನ್ವಯ ರಾಜ್ಯದ 32 ಜಿಲ್ಲಾ ಸ್ಕೌಟ್-ಗೈಡ್ ಸಂಸ್ಥೆಗಳಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯ್ತಿಗಳು, ತಾಲ್ಲೂಕು ಹಾಗು ಜಿಲ್ಲಾ ಪಂಚಾಯತ್‌ಗಳು ನೀಡಿದ ಹಣಕಾಸಿನ ಸಹಾಯಕ್ಕೆ ಸಂಸ್ಥೆಯ ಬಗ್ಗೆ ಸರ್ಕಾರಕ್ಕೆ ಹಾಗೂ ಪಂಚಾಯತ್‌ರಾಜ್ ಸಂಸ್ಥೆಗಳಿಗಿರುವ ವಿಶ್ವಾಸ ಮತ್ತು ನಂಬಿಕೆ ಕಾರಣ. ಭಾರತದ ಸ್ಕೌಟಿಂಗ್-ಗೈಡಿಂಗ್‌ನ 105 ವರ್ಷಗಳ ಭವ್ಯ ಪರಂಪರೆ ಮತ್ತು ಇತಿಹಾಸದಲ್ಲಿ ರಾಜ್ಯದ ಎಲ್ಲಾ ಹಂತದ ಪಂಚಾಯತ್‌ರಾಜ್ ಸಂಸ್ಥೆಗಳು ಪ್ರಥಮಬಾರಿಗೆ ಸ್ಕೌಟ್ಸ್-ಗೈಡ್ಸ್ ಚಳವಳಿಯ ಬೆಳವಣಿಗೆಗೆ ನೀಡಿರುವ ಅಂದಾಜು ಒಟ್ಟು ಹಣ ರೂ. 65.70 ಲಕ್ಷಗಳು. ಇದು ಚಳವಳಿಯ ಇತಿಹಾಸದಲ್ಲಿಯೇ ಸುವರ್ಣಾಕ್ಷರಗಳಲ್ಲಿ ಬರೆದಿಡಬಹುದಾದ ಹೆಮ್ಮೆಯ-ಹಾಗೂ ಸಂತಸದ ವಿಷಯ ಎಂದು ಭಾವಿಸಿದ್ದೇನೆ. ರಾಜ್ಯದ ಸಂಬಂಧಪಟ್ಟ ಎಲ್ಲಾ ಜಿಲ್ಲೆಗಳ ಗ್ರಾಮ ಪಂಚಾಯ್ತಿಗಳಿಗೆ-ತಾಲ್ಲೂಕು ಪಂಚಾಯತ್‌ಗಳಿಗೆ- ಜಿಲ್ಲಾ ಪಂಚಾಯತ್‌ಗಳಿಗೆ ಹಾಗೂ ಅವುಗಳ ಪದಾಧಿಕಾರಿಗಳಿಗೆ - ಅಧಿಕಾರಿಗಳಿಗೆ ಹಾಗು ಸಿಬ್ಬಂದಿ ವರ್ಗಕ್ಕೆ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

ಜಿಲ್ಲಾ ಸಂಸ್ಥೆಗಳು ಈಗಾಗಲೇ ಪಂಚಾಯತ್‌ರಾಜ್ ಸಂಸ್ಥೆಗಳು ಪ್ರಥಮ ಬಾರಿಗೆ ನೀಡಿರುವ ಹಣವನ್ನು ಜಿಲ್ಲೆಗಳ/ಸ್ಥಳೀಯ ಸಂಸ್ಥೆಗಳ ಮೇಳಗಳಿಗೆ, ಸಮವಸ್ತ್ರಕ್ಕೆ, ಕಾರ್ಯಕ್ರಮಗಳಿಗೆ, ತರಬೇತಿಗಳಿಗೆ-ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಉಪಯೋಗಿಸಿದ್ದು ರಾಜ್ಯ ಸಂಸ್ಥೆಗೆ ಈಗಾಗಲೇ ಹಲವು ಜಿಲ್ಲಾ ಸಂಸ್ಥೆಗಳಿಂದ ವಿವರವಾಗಿ ವರದಿಗಳು ಬಂದಿದೆ.

ರಾಜ್ಯ ಸರ್ಕಾರದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆ-ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಹಣಕಾಸು ಇಲಾಖೆ ಹಾಗೂ ಉನ್ನತ ಶಿಕ್ಷಣ ಇಲಾಖೆಗಳು ಕಬ್-ಬುಲ್‌ಬುಲ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್, ದಳ-ಘಟಕಗಳನ್ನು ಹೆಚ್ಚಿಸುವ ನಮ್ಮಗಳ ಪ್ರಾಮಾಣಿಕ ಪ್ರಯತ್ನದಲ್ಲಿ ಸಾಕಷ್ಟು ಸಹಾಯ-ಸಹಕಾರ ಮಾರ್ಗದರ್ಶನವನ್ನು ನೀಡುತ್ತಿದ್ದು, ಸ್ಕೌಟ್-ಗೈಡ್ ಚಳವಳಿಯ ವಿವಿಧ ಹಂತದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನನ್ನ ಎಲ್ಲಾ ಸಹೋದ್ಯೋಗಿಗಳನ್ನು ಆತ್ಮೀಯವಾಗಿ ಅಭಿನಂದಿಸುವುದರೊಂದಿಗೆ - ನಾವುಗಳೆಲ್ಲಾ ಇನ್ನೂ ಹೆಚ್ಚು ಹೆಚ್ಚು ಕ್ರಿಯಾಶೀಲರಾಗ ಬೇಕೆಂದು ಕೋರುತ್ತೇನೆ.

ನಾನು ಈ ಹಿಂದೆ ನನ್ನ ಮಾತುಗಳಲ್ಲಿ ನಿಮ್ಮಗಳ ಗಮನ ಸೆಳೆದಿರುವಂತೆ - 2012-13 ವರ್ಷ ಮುಗಿಯುತ್ತಿದ್ದು 2013-14ನೇ ಸಾಲಿನಲ್ಲಿ ನಿಮ್ಮ ದಳ-ಘಟಕಗಳ ವಾರ್ಷಿಕ ಕಾರ್ಯಕ್ರಮಗಳ ಯೋಜನೆಯಂತೆ ವರ್ಷದ ಪ್ರಾರಂಭದಲ್ಲೇ ಹಲವಾರು ಕಾರ್ಯಕ್ರಮಗಳು-ತರಬೇತಿಗಳು-ವಿವಿಧ ಹಂತದ ಮೇಳಗಳು-ಸಮ್ಮೇಳನಗಳನ್ನು ಮಾಡುವಲ್ಲಿ ತಾವುಗಳೆಲ್ಲಾ ಸಕ್ರಿಯವಾಗಿ ಚಿಂತಿಸಿ ಕಾರ್ಯೋನ್ಮುಖರಾಗಬೇಕಾಗಿ ಕೋರುತ್ತೇನೆ. ಅದರಲ್ಲೂ ಮುಖ್ಯವಾಗಿ ದಳ-ಘಟಕಗಳು ಇನ್ನೂ ಹೆಚ್ಚೆಚ್ಚು ಕ್ರಿಯಾತ್ಮಕವಾಗಿ ಕರ್ತವ್ಯ ನಿರ್ವಹಿಸುವ ಪ್ರಾಮಾಣಿಕ ಪ್ರಯತ್ನ ಮಾಡಿ, ದಳ-ಘಟಕಗಳು ಹಾಗೂ ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ತಮ್ಮಗಳ ವಾರ್ಷಿಕ ಕಾರ್ಯಕ್ರಮಗಳನ್ನು ಯಾವುದೇ ಆತಂಕವಿಲ್ಲದೆ ನಡೆಸಿಕೊಂಡುಹೋಗಬಹುದೆಂಬ ಚಿಂತನೆ ನನ್ನದಿದ್ದು- ನಾವುಗಳೆಲ್ಲರೂ ಈ ದಿಕ್ಕಿನಲ್ಲಿ ಕಾರ್ಯೋನ್ಮುಖರಾಗೋಣ ಎಂದು ಆಶಿಸುತ್ತೇನೆ.

ಜಿಲ್ಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಜಿಲ್ಲಾ ಸಂಘಟಕರುಗಳಿಗೆ ರಾಜ್ಯ ಸಂಸ್ಥೆಯು ಈಗಾಗಲೇ ಸೂಚಿಸಿರುವಂತೆ, ದಳ-ಘಟಕಗಳು ಇನ್ನೂ ಹೆಚ್ಚು ಕ್ರಿಯಾತ್ಮಕವಾಗಲು- ನಿಮಗೆ ಆಗಾಗ್ಗೆ ಬರಬಹುದಾದ-ಇರಬಹುದಾದ ಹಲವಾರು ಸಮಸ್ಯೆಗಳಿಗೆ ಮಾರ್ಗದರ್ಶನ ಮಾಡುವುದು ಅವರುಗಳ ಕರ್ತವ್ಯ ಮತ್ತು ಜವಾಬ್ದಾರಿ ಕೂಡ. ಇನ್ನೊಂದು ಮಾತು ರಾಜ್ಯ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಂಘಟನೆ ಹಾಗೂ ತರಬೇತಿ ವಿಭಾಗಗಳ ಮುಖ್ಯಸ್ಥರಾಗಿರುವ 'ಎಸ್.ಓ.ಸಿ.,/ ಎಸ್.ಟಿ.ಸಿ.,' ಗಳನ್ನು ತಾವುಗಳು ನೇರವಾಗಿ ಸಂಪರ್ಕಿಸಿ-ನಿಮ್ಮಗಳ ಸಮಸ್ಯೆಗಳಿಗೆ ಸೂಕ್ತ ಸಲಹೆ-ಮಾರ್ಗದರ್ಶನ ಆಗಿಂದ್ದಾಗ್ಗೆ ಪಡೆಯಬೇಕಾಗಿ ಕೋರುತ್ತೇನೆ.

ರಾಜ್ಯ ಸಂಸ್ಥೆ ಹಾಗೂ ರಾಷ್ಟ್ರೀಯ ಸಂಸ್ಥೆ 2013-14ನೆ ಸಾಲಿನಲ್ಲಿ ಏರ್ಪಡಿಸುವ ಎಲ್ಲಾ ಕಾರ್ಯಕ್ರಮಗಳು, ಉತ್ಸವಗಳು, ಮೇಳಗಳು ಹಾಗು ವಿವಿಧ ಹಂತದ ತರಬೇತಿಗಳಿಗೆ ನಿಮ್ಮ ಜಿಲ್ಲೆಗಳಿಗೆ ನೀಡಿದ ಸಂಖ್ಯೆಗನುಗುಣವಾಗಿ ಭಾಗವಹಿಸಬೇಕಾಗಿ ಕೋರುತ್ತೇನೆ.

2013-2014ನೇ ವರ್ಷದಲ್ಲಿ ದಳ-ಘಟಕಗಳು ಸ್ಥಳೀಯ ಸಂಸ್ಥೆಗಳು- ಜಿಲ್ಲಾ ಸಂಸ್ಥೆಗಳು-ಹಾಗು ರಾಜ್ಯ ಸಂಸ್ಥೆ ಇನ್ನೂ ಹೆಚ್ಚು ಕ್ರಿಯಾಶೀಲರಾಗುವಲ್ಲಿ ನಮ್ಮಗಳಿಗೆ ಹಾಗೂ ನಿಮಗೆ ಮಾರ್ಗದರ್ಶನ ನೀಡುವಲ್ಲಿ ಸಂಸ್ಥೆಯಲ್ಲಿ ಕ್ರಿಯಾತ್ಮಕವಾಗಿ- ಪ್ರಾಮಾಣಿಕವಾಗಿ-ತಮ್ಮಗಳ ಕರ್ತವ್ಯಗಳನ್ನು ನಿರ್ವಹಿಸುತ್ತಿರುವ ನಮ್ಮಗಳ ಸುತ್ತು-ಮುತ್ತಲಿನಲ್ಲಿರುವ ಹಲವಾರು ದಳ-ಘಟಕಗಳ ನಾಯಕರುಗಳು- ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಸೂಕ್ತ ಮಾರ್ಗದರ್ಶನ ನೀಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# ರಾಜ್ಯ ವಾರ್ತೆ..............

## State Level Himalaya Badge Holders Meet - I

The State Level H.W.B. Holders Meet-I was held at S.T.C. Jeedimatta A.P. from 29th to 31st January 2013. 169 participants from 13 Districts of Karnataka including staff participated. Sri Sreedhra Rao, State Secretary A.P State B.S.G. inaugurated the meet. Mr Parameshwar S.O.C.(S) Mr. M . Narasinga Rao, S.T.C. (S) Mrs. Umadevi STC(G) Mr. D Prasad Administrative Officer were the Chief Guests.

Mr. V.R. Ganathy, Former Joint Director & Former National Training Commissioner (S) visited & blessed the participants.

Fundamentals, change of duties Community Development, P.M. Shield competition Troop / company / pack /Flock meeting and other subjects were conducted.

Mr. M.V. Janardhan LT(S) was the L.O.C., and was ably assisted by Mr. V.M. Narayanaswamy LT(C), Smt. Radhamma, L.T.(C), Mr. V.M. Ramachandra LT(S) Mr. Gopalakrishna LT(S) and Mr. Sharaff Madappa L.T(S) Mrs Shashikala ALT(G) Mrs. Nagarathanamma ALT(B)

Mr. M. Narasinga Rao STC(S) of AP was with us for 4 days & guided & Supported in all respects. Sri C.S. Reddy Hon. S.T.C. (S) monitred the meet

## State Level Himalaya Badge Holders Meet - II

The State Level H.W.B. Holders Meet-II was held at State Training Centre. Pune from 17th to 20th February 2013. 84 participants from 11 districts participated.

Fundamentals, Model Troop Meeting, Community Development, P.M. Shield Competition, Badge Committees, Proficiency Badges were dealt with.

Mr. Arun A.S.O.C., (S) Mr. Swamy L.T. (S) Mr. Sunil Mr. Patil of Maharastra helped us in the success of the Meet.

Mrs. H.K. Leela STC(G), Mr. Prathimkumar, LT(S) were the L.O.C's of the meet, Mr. C.S. Reddy Hon. STC(S) monitored the meet.

# World Scout Day and Thinking Day Celebrations held on 22-02-2013

The Bharat Scouts and Guides, Karnataka State Headquarters orgainsed the World Scout Day, the Birthday of Lord Baden Powell, the founder of the movement and Thinking day, the Birthday of Lady Baden Powell on 22.02.2013 at Shanthigruha Training and Camping centre Bangalore .Nearly 450 Cubs, Bulbuls Scouts and Guides along with their unit Leaders participated in the event.

Sri.D.Basavaraju. K.A.S, Director (Programme) Sarva Shikshana Abhiyan was the Chief Guest at the Valedictory function .In his address he appreciated the activities of the Scouts and Guides and extended all necessary Support to the Movement.

Dr.Geetha Nyamagowdar, Deputy Director (Child Welfare)Department of Health and Family Welfare Services spoke about the importance of the child care and its importance.

Smt. Saroja .V. Naidu Vice President addressed the gathering Smt.Geetha Nataraj Headquarters Commissioner (G) presented the Report, Sri.N.Srinivasan Head quarters Commissioner for publication Renewed Promise.

Sri.Kondajji.B.Shanmukhappa State Chief commissioner in his presidential address requested the Director (Programme) S.S.A to extend their support for organizing Training courses for Teachers.

Sri M.A.Chellaiah, Joint State Secretary(Scouts) Welcomed and Smt B.V.Ramalatha, Joint State Secretary (Guides) proposed Vote of Thanks.

The theme for this year 2013 was taken from Millenium Development Goals of UNO the Theme is as follows.

1. Together we can save children's lives

2. Every mother's life &Health is Precious.

The programme was conducted on 22.02.2013 based on theme

Earlier in the morning the programme started with the prayer &flag hoisting followed by the Opening Ceremony planned by Smt.Mythily Sampath, Former Assistant State Commissioner (Guides) and Miss P.Saroja, Assistant State Commissioner (Guides).

Cubs& Bulbuls participated in Drawing & Painting on the Theme &happily gave their own expression and enjoyed. Story Telling was another Interesting activity.

Scouts &Guides participated in the Drawing &painting competition. Group Song competition went on well. Group Discussion on theme was conducted.

Rovers &Rangers also participated in Drawing & Painting Competition.

Group Discussions was on 'Every Mother life & Health is Precious", Dr. Parimala, Dept of Public Health addressed the gathering about the Theme.

Sri.Manjunathachar I/c State Organising Commissioner (Scouts) Smt.Janakivenugopal State Organising Commissioner (Guides ) Co-Ordinated the programme assisted by Smt.Susheela Gopal Headquarters Commissioner (Guides) Smt K.K.Leela State Training Commissioner (Guides) Sri.A.M.Shankar ASOC(S) Smt.B.D.Shantha LT(G) Smt.Shaila Suryavamshi,Miss Mary Philomina Guide Captain.

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ದಿನಾಂಕ 22-02-2013 ರಂದು ಬೆಳಿಗ್ಗೆ ಎಸ್.ಇ.ಎಸ್. ಬಾಲಕಿಯರ ಪ್ರೌಢಶಾಲೆಯಲ್ಲಿ ಸಿರುಗುಪ್ಪ ತಾಲ್ಲೂಕಿನ ಸ್ಕೌಟ್ಸ್ ಮತ್ತು ಗೈಡ್ಸ್, ತಾಲ್ಲೂಕು ಮೇಳ ಹಮ್ಮಿಕೊಳ್ಳಲಾಗಿತ್ತು. 400 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು. ಉಪಹಾರದ ನಂತರ ನಗರದಲ್ಲಿ ಪ್ರಭಾತ್ ಪೇರಿಗೆ ಹಸಿರು ನಿಶಾನೆಯನ್ನು ಶ್ರೀ ಬಿ.ಕೆ ರುದ್ರಮುನಿ, ಕ್ಷೇತ್ರ ಶಿಕ್ಷಣಾಧಿಕಾರಿ ತೋರಿಸಿದರು. ಶ್ರೀಮತಿ ಅನ್ನಮ್ಮ ಮುಖ್ಯೋಪಾಧ್ಯಾಯಿನಿ ಎಸ್.ಇ.ಎಸ್. ಬಾಲಕಿಯರ ಪ್ರೌಢಶಾಲೆ, ಶ್ರೀ ಅರುಣ ಪ್ರತಾಪರೆಡ್ಡಿ, ಉಪಾಧ್ಯಕ್ಷರು ಕ.ರಾ. ಪ್ರಾ. ಶಿ. ರಾ. ಸಂ. ಬೆಂಗಳೂರು, ಶ್ರೀ ಪಿ. ಸೂರ್ಯಕಾಂತರೆಡ್ಡಿ, ಅಧ್ಯಕ್ಷರು ಕ.ರಾ.ಪ್ರಾ.ಶಿ. ತಾ. ಸಂ. ಸಿರಗುಪ್ಪ, ಶ್ರೀ ದೊಡ್ಡನಗೌಡ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲ್ಲೂಕು ಕಾರ್ಯದರ್ಶಿ ಶ್ರೀ ಜಿ. ಕೃಷ್ಣ, ಅಧೀಕ್ಷರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಸಿರಿಗುಪ್ಪ, ಶ್ರೀಮತಿ ಮಲ್ಲೇಶ್ವರಿ, ಜಿಲ್ಲಾ ಸಂಘಟಕರು, ಸ್ಕೌಟ್ಸ್ ಮತ್ತು ಗೈಡ್ಸ್ ಬಳ್ಳಾರಿ ಹಾಗೂ ಇತರ ಶಿಕ್ಷಕರು ಹಾಜರಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಹೆಚ್. ಶಿವಕುಮಾರ ತಹಶೀಲ್ದಾರರು ಲಾರ್ಡ್ ಬೇಡನ್ ಪಾವೆಲ್‌ರವರ ಭಾವಚಿತ್ರಕ್ಕೆ ಹೂಮಾಲೆ ಹಾಕಿ ದೀಪ ಬೆಳಗಿಸುವುದರ ಮೂಲಕ ನೆರವೇರಿಸಿದರು. ಅಧ್ಯಕ್ಷತೆಯನ್ನು ಶ್ರೀ ಹೆಚ್. ಗುರಪ್ಪ ಇವರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಕೆ. ಸುದರ್ಶನ್ ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಇವರು ಆಗಮಿಸಿದ್ದರು.

ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ರಸಪ್ರಶ್ನೆ, ಹಾಗೂ ಬಿ.ಪಿ. ರವರ ಬಗ್ಗೆ ಭಾಷಣ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಶ್ರೀ ನಟರಾಜಸ್ವಾಮಿ, ಖಜಾಂಚಿ ಇವರು ಸ್ವಾಗತ ಭಾಷಣ ಮಾಡಿದರು. ವಂದನಾರ್ಪಣೆಯನ್ನು ಶ್ರೀ ಯೋಗೇಶ್ ಸ್ಕೌಟ್ಸ್ ಮಾಸ್ಟರ್ ಮಾಡಿದರು. ಕಾರ್ಯಕ್ರಮ ನಿರೂಪಣೆಯನ್ನು ಶ್ರೀ ಶಿವಕುಮಾರ, ಸ್ಕೌಟ್ ಮಾಸ್ಟರ್ ಮಾಡಿದರು.

ದಿನಾಂಕ 22-02-2013 ರಂದು ಹೊಸಪೇಟೆ ತಾಲ್ಲೂಕು ಸಂಸ್ಥೆಯ ಆಶ್ರಯದಲ್ಲಿ ಲಾರ್ಡ್ ಬೇಡನ್ ಪೋವೆಲ್ ಅವರ ಜನ್ಮ ದಿನಾಚರಣೆ ಹಾಗೂ "ಚಿಂತನಾ ದಿನ"ವನ್ನು ಮರಿಯಮ್ಮನಹಳ್ಳಿಯ ಶ್ರೀ ಗಣೇಶಮಲ್ ಜೈನ್ ಬಾಲಕಿಯರ ಸ.ಹಿ.ಪ್ರಾ. ಶಾಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಶ್ರೀ ಜಿಲಾನ್, ಗ್ರಾಮ ಪಂಚಾಯತಿ ಅಧ್ಯಕ್ಷರು, ಶ್ರೀಮತಿ ಮೇಘಾ ಹಾಗೂ ಶ್ರೀ ಮಾರಗದಪ್ಪ ಕ್ಷೇತ್ರ ಶಿಕ್ಷಣ ಇಲಾಖೆ ವತಿಯಿಂದ ಭಾಗವಹಿಸಿದ್ದರು. ಜಿಲ್ಲಾ ತರಬೇತಿ ಆಯುಕ್ತರು ಗೈಡ್ಸ್, ಶ್ರೀಮತಿ ಜಯಶ್ರೀ ಜೋಷಿ-ಕಾರ್ಯದರ್ಶಿ, ಶ್ರೀ ರಾಜಶೇಖರ-ಸಹಕಾರ್ಯದರ್ಶಿ, ಶ್ರೀ ತಿಪ್ಪೇಸ್ವಾಮಿ ಹಾಗೂ ಖಜಾಂಚಿ ಶ್ರೀ ರಾಮಜ್ಜ ಭಾಗವಹಿಸಿದ್ದರು. "ಸರ್ವಧರ್ಮ ಪ್ರಾರ್ಥನೆ" ಮೂಲಕ "ಚಿಂತನಾ ದಿನ" ಆಚರಣೆ ಪ್ರಾರಂಭವಾಯಿತು. ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ಕೌಟಿಂಗ್-ಗೈಡಿಂಗ್ ಬಗ್ಗೆ ಭಾಷಣ, ಬೇಡನ್ ಪೋವೆಲ್ ಅವರ ಚಿತ್ರ ಬಿಡಿಸುವ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು.

ದಿನಾಂಕ 25-02-2013 ರಿಂದ 27-02-2013 ರ ವರೆಗೆ ಜಿಲ್ಲಾ ಮಟ್ಟದ ರಾಜ್ಯಪುರಸ್ಕಾರ ಪೂರ್ವಭಾವಿ ತರಬೇತಿ ಶಿಬಿರವನ್ನು ಜಿಂದಾಲ್ ಆದರ್ಶ ವಿದ್ಯಾಲಯದ ತೋರಣಗಲ್‌ನಲ್ಲಿ ನಡೆಸಲಾಯಿತು. 60 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು. ಶ್ರೀ ಆರ್. ಚಂದ್ರಪ್ಪ ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಶ್ರೀಮತಿ ಮಲ್ಲೇಶ್ವರಿ ಜಿಲ್ಲಾ ಸಂಘಟಕರು ಸಂಪನ್ಮೂಲ ವ್ಯಕ್ತಿಗಳಾಗಿದ್ದರು. ಟೆಸ್ಟಿಂಗ್ ಕ್ಯಾಂಪ್‌ನಲ್ಲಿ ಸ್ಕೌಟ್-ಗೈಡ್ಸ್‌ಗಳ ಲಾಗ್ ಪುಸ್ತಕಗಳನ್ನು ಪರಿಶೀಲನೆ ಮಾಡಲಾಯಿತು. ಜಿಲ್ಲಾ ಮಟ್ಟದ ರಾಜ್ಯ ಪುರಸ್ಕಾರ್, ಪೂರ್ವಸಿದ್ಧತಾ ಮುಕ್ತಾಯ ಸಮಾರಂಭಕ್ಕೆ ಜಿಂದಾಲ್ ಆದರ್ಶ ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀಮತಿ ನಮಿತ್ರ ಶರ್ಮ ಹಾಗೂ ಮುಖ್ಯ ಗುರುಮಾತೆಯರಾದ ಶ್ರೀಮತಿ ರಾಜೇಶ್ವರಿ ಡಂಬಲ್ ಇವರು ಭಾಗವಹಿಸಿದ್ದರು. ಈ ಕಾರ್ಯಕ್ರಮದ ನಿರೂಪಣೆ ಶ್ರೀ ರವಿ, ಜಿಂದಾಲ್ ಶಾಲೆ ಇವರು ನಡೆಸಿಕೊಟ್ಟರು ವಂದನಾರ್ಪಣೆ ಶ್ರೀ ನಾಗರಾಜ ಡ್ರೀಮ್ ವರ್ಲ್ಡ್ ಶಾಲೆ ಇವರು ಮಾಡಿದರು.

ದಿನಾಂಕ 02-03-2013 ರಂದು ಲಾರ್ಡ್ ಬೇಡನ್ ಪೋವೆಲ್ ಅವರ ಜನ್ಮ ದಿನಾಚರಣೆಯನ್ನು ಎಂ.ಜಿ.ಎಂ. ಶಾಲೆ, ಬಳ್ಳಾರಿ ಹಾಗೂ ಮಹಿಳಾ ಸಮಾಜ ಶಾಲೆ, ಹೊಸಪೇಟೆ ಇವರು ಹಮ್ಮಿಕೊಂಡಿದ್ದರು.

## ರಾಯಚೂರು

ದಿನಾಂಕ 22-02-2013 ರಂದು ಬಸವಶ್ರೀ ಪ್ರಾಥಮಿಕ ಹಾಗೂ ಪ್ರೌಢ ಶಾಲೆ ರಾಯಚೂರಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ನ ಸಂಸ್ಥಾಪಕರಾದ ಲಾರ್ಡ್ ಬೇಡೆನ್ ಪೋವೆಲರ ಜನ್ಮ ದಿನಾಚರಣೆ ಸಮಾರಂಭವನ್ನು ಹಮ್ಮಿಕೊಳ್ಳಲಾಯಿತು. ಮುಖ್ಯ ಅತಿಥಿ ಸ್ಥಾನವನ್ನು ಶಾಲೆಯ ಸಂಸ್ಥಾಪಕರಾದ ಶ್ರೀಮತಿ ಲಲಿತಾ ಎಂ ವಹಿಸಿದ್ದರು. ಸಹಶಿಕ್ಷಕಿಯಾದ ಶ್ರೀಮತಿ ನಿರ್ಮಲಾ ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ವಿಜಯಲಕ್ಷ್ಮಿ ಸ್ವಾಗತಿಸಿದರು. ಶ್ರೀಮತಿ ಜಯಶ್ರೀ ವಂದಿಸಿದರು. ಮುಖ್ಯ ಅತಿಥಿ ಸ್ಥಾನವನ್ನು ವಹಿಸಿದ್ದ ಶ್ರೀಮತಿ ಲಲಿತಾ ಎಂ. ಮಾತನಾಡಿ ಬೇಡೆನ್ ಪಾವೆಲ್‌ರ ಸಾಧನೆ ಹಾಗೂ ಅಂತಿಮ ಸಂದೇಶವನ್ನು ಮಕ್ಕಳಿಗೆ ತಿಳಿಸಿದರು.

ದಿನಾಂಕ :22-02-2013 ರಂದು ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಸಿಂಧನೂರು ಇವರುಗಳ ಸಂಯುಕ್ತಾಶ್ರಯದಲ್ಲಿ ಸಿಂಧನೂರು ನಗರದ ಪಂ. ಪುಟ್ಟರಾಜ ಗವಾಯಿಗಳ ಉದ್ಯಾನವನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಜನಕ ಲಾರ್ಡ್ ಬೇಡನ್ ಪೊವೆಲ್ ರವರ ಜನ್ಮ ದಿನಾಚರಣೆಯನ್ನು "ವಿಶ್ವ ಚಿಂತನಾ ದಿನವನ್ನಾಗಿ" ಹಾಗೂ ಜಿಲ್ಲಾ ರ್‍ಯಾಲಿಯನ್ನು ಹಮ್ಮಿಕೊಳ್ಳಾಯಿತು. ಅಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಗಿತ್ತು. ನಂತರ ಸಿಂಧನೂರಿನ ಪ್ರಮುಖ ರಸ್ತೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ಗಳಿಂದ ಪಥಸಂಚಲನ ಕಾರ್ಯಕ್ರಮ ಮಾಡಲಾಯಿತು. ಈ ಪಥಸಂಚಲನವನ್ನು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಸ್. ಶರಣೇಗೌಡ ಹಾಗೂ ಖಜಾಂಚಿಗಳಾದ ಶ್ರೀ ಗೌತಮಶೇಟ್ ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ನಂತರ ಸ್ಕೌಟ್ಸ್-ಗೈಡ್ಸ್‌ಗಳಿಗೆ ಚಿತ್ರಕಲೆ ಮತ್ತು ಗಾಯನ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು.

ಮಧ್ಯಾಹ್ನ ಬೇಡನ್ ಪೋವೆಲ್‌ರ ಜನ್ಮ ದಿನಾಚರಣೆಯ ಕಾರ್ಯಕ್ರಮವನ್ನು ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು, ಬಿ.ಪಿಯವರ ಭಾವಚಿತ್ರಗಳಿಗೆ ಮಾಲಾರ್ಪಣೆ ಮಾಡುವುದರ ಮೂಲಕ ಚಾಲನೆ ನೀಡಿದರು. ನಂತರ ಅವರು ಮಾತನಾಡಿ ಸ್ಕೌಟ್ಸ್ ಮಾನವೀಯ ಮೌಲ್ಯಗಳನ್ನು ಬಿತ್ತರಿಸಿ ಒಳ್ಳೆಯ ಮನೋಭಾವ ಬೆಳೆಸುವಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತದೆ ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀ ಎಸ್. ಶರಣೇಗೌಡ ಅಧ್ಯಕ್ಷರು ಸ್ಥಳೀಯ ಸಂಸ್ಥೆ ಸಿಂಧನೂರು ಇವರು ಇಂದು ವಿದ್ಯಾರ್ಥಿ ಜೀನವದಲ್ಲಿ ಶಿಸ್ತು ಮತ್ತು ವ್ಯಕ್ತಿತ್ವ ವಿಕಸನಗೊಳಿಸುವಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಉತ್ತಮ ಕಾರ್ಯ ಮಾಡುತ್ತಿದೆ ಎಂದರು. ಶ್ರೀ ರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌ) ಪ್ರಾಸ್ತಾವಿಕವಾಗಿ ಮಾತನಾಡಿದರು.

ಮುಖ್ಯ ಅತಿಥಿಗಳಾಗಿ, ಶ್ರೀ ಬಾಲಪ್ಪ ದಾಸರ, ಶಿಕ್ಷಣ ಸಂಯೋಜಕರು, ಆಲಿಯಾಖಾನ, ಜಂಟಿ ಕಾರ್ಯದರ್ಶಿಗಳು ಶ್ರೀ ಆರ್.ಸಿ. ಪಾಟಿಲ್, ಶ್ರೀ ಆರ್.ಹೆಚ್. ಸಾಗರ ಆಗಮಿಸಿದ್ದರು. ವೇದಿಕೆಯಲ್ಲಿ ಶ್ರೀಮತಿ ನಾಗರತ್ನ ಪಾಟೀಲ, ಶ್ರೀ ರವಿ ಅಂತರವಳ್ಳಿ ಕಾರ್ಯದರ್ಶಿಗಳು ಸಿಂಧನೂರು, ಶ್ರೀ ಮುದ್ಗಲ್ ಸಾಬ್, ಆಯುಕ್ತರು (ಸ್ಕೌ) ಶ್ರೀಮತಿ ಸೀಮಾ, ಉಪಸ್ಥಿತರಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ಶಂಭುಲಿಂಗ ಸ್ವಾಗತಿಸಿದರು. ಏಳುಕೋಟೆಪ್ಪ ಕಾರ್ಯಕ್ರಮ ನಿರೂಪಿಸಿದರು, ಶ್ರೀ ಗಂಗಪ್ಪ ವಂದಿಸಿದರು. ಈ ರ್‍ಯಾಲಿಯಲ್ಲಿ 250 ಸ್ಕೌಟ್ಸ್, 200 ಗೈಡ್ಸ್ ಹಾಗು 30 ಸ್ಕೌಟ್ ಮಾಸ್ಟರ್‌ಗಳು ಮತ್ತು 20 ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು.

ದಿನಾಂಕ : 23-02-2013 ರಂದು ಸ್ನೇಹಜ್ಯೋತಿ ವಿದ್ಯಾಲಯ, ಪೊತ್ನಾಳ ತಾಲ್ಲೂಕು ಮಾನ್ವಿಯಲ್ಲಿ ನೇತಾಜಿ ಸುಭಾಷ್ ಚಂದ್ರಬೋಸ್ ಕಬ್ ಪ್ಯಾಕ್‌ನ್ನು ಹೊಸದಾಗಿ ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಸಂಸ್ಥೆಯ ಕಾರ್ಯದರ್ಶಿಗಳಾದ ಫಾದರ್ ಚೇತನ್ ಲೋಬೋ, ಪ್ರಾಂಶುಪಾಲರಾದ ಫಾದರ್ ಡ್ಯಾನಸಿ, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ರಾವುತ್ ರಾವ್ ಬರೂರ, ಕಬ್ ಮಾಸ್ಟರುಗಳಾದ ಕು. ಮಾರ್ಗರೇಟ್ ಮೇರಿ, ಸುಬ್ರಮಣ್ಯಂ, ವೇಣು, ಮಾರುತಿ ಬಿ. ಹಾಗೂ ಪಾಲಕರು, ಶಿಕ್ಷಕ ವೃಂದದವರು ಉಪಸ್ಥಿತರಿದ್ದರು.

ದಿನಾಂಕ 24-02-2013 ರಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಗದ್ರಟಗಿಯಲ್ಲಿ ಪಲ್ಸ್ ಪೋಲಿಯೋ ಲಸಿಕೆ ಕಾರ್ಯಕ್ರಮದಲ್ಲಿ ಅಂಗನವಾಡಿ ಸಿಬ್ಬಂದಿ ಮತ್ತು ಆಶಾ ಕಾರ್ಯಕರ್ತೆಯರ ಜೊತೆಗೂಡಿ ಶಾಲೆಯ ಸುಭಾಷ್ ಚಂದ್ರಬೋಸ್

ಸ್ಕೌಟ್ ದಳ, ಶ್ರೀ ಚೌಡೇಶ್ವರಿ ಗೈಡ್ ದಳ ಮತ್ತು ಚಾಚಾನೆಹರು ಕಬ್ ಪ್ಯಾಕ್ ವತಿಯಿಂದ ಸುಮಾರು 40 ಸ್ಕೌಟ್ಸ್-ಗೈಡ್ಸ್‌ಗಳು ಪಾಲ್ಗೊಂಡು, ಊರಿನ ಎಲ್ಲ ಮನೆಯಲ್ಲಿರುವ 5 ವರ್ಷದ ಒಳಗಿನ ಮಕ್ಕಳಿಗೆ ಪೋಲಿಯೋ ಬೂತ್‌ಗೆ ಕರೆತಂದು ಲಸಿಕೆಯ ಹನಿ ಹಾಕಿಸಿದರು. "ಪೋಲಿಯೋ ಹಾಕಿಸಿ, ಅಂಗವೈಕಲ್ಯ ಹೊಡೆದೋಡಿಸಿ" ಎಂಬ ಘೋಷಣೆ ಸಾರಿದರು. ಈ ಕಾರ್ಯಕ್ರಮದಲ್ಲಿ ಆರೋಗ್ಯ ಇಲಾಖೆಯ ಶ್ರೀಮತಿ ಅಜಿಜಾ ಸುಲ್ತಾನ, ಕಿರಿಯ ಆರೋಗ್ಯ ಸಹಾಯಕಿ, ಪಾಲ್ಗೊಂಡಿದ್ದರು. ಶಾಲೆಯ ಶಿಕ್ಷಕರಾದ ಶ್ರೀ ಮಲ್ಲಿಕಾರ್ಜುನ, ಜೋಗಿಹಳ್ಳಿ, ಸ. ಶಿ. ಕಾರ್ಯಕ್ರಮದಲ್ಲಿ ಪಾಲ್ಗೊಂಡು ಯಶಸ್ವಿಗೊಳಿಸಿದರು.

ದಿನಾಂಕ 27-02-2013 ರಂದು ಸ. ಹಿ. ಪ್ರಾ. ಶಾಲೆ, ಬುರ್ದಿಪಾಡ ತಾಲ್ಲೂಕು ಜಿಲ್ಲಾ ರಾಯಚೂರಿನಲ್ಲಿ ಭಗತ್ ಸಿಂಗ್ ಕಬ್ ಪ್ಯಾಕ್ ಉದ್ಘಾಟಿಸಲಾಯಿತು. ಉದ್ಘಾಟನೆಯನ್ನು ಶ್ರೀ ರಾವುತರಾವ್ ಬರೂರ, ಜಿಲ್ಲಾ ಸಂಘಟನಾ ಆಯುಕ್ತರು ನೆರವೇರಿಸಿದರು. ಈ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ವ್ಹಿ. ನಾರಾಯಣ, ಶಕ್ತಿನಗರ ಪಿ.ಎಸ್.ಐ. ಹಾಗೂ ಶ್ರೀ ಪ್ರಭುಲಿಂಗಯ್ಯ ಹಿರೇಮಠ, ಯಾಪಲದಿನ್ನಿ ಪಿ.ಎಸ್.ಐ., ಹಾಗೂ ಊರಿನ ಮುಖಂಡರಾದ ಶ್ರೀನಿವಾಸರೆಡ್ಡಿ ಭಾಗವಹಿಸಿ ಶುಭಕೋರಿದರು. ಈ ಸಂದರ್ಭದಲ್ಲಿ ಎಸ್.ಡಿ.ಎಂ. ನ ಅಧ್ಯಕ್ಷರು, ಸದಸ್ಯರು, ಕಬ್ ಮಾಸ್ಟರ್ ಶ್ರೀ ಸುರೇಶ್ ಹಾಗೂ ಶಾಲೆಯ ಶಿಕ್ಷಕರು ಉಪಸ್ಥಿತರಿದ್ದರು.

ದಿನಾಂಕ 01-03-2013 ರಂದು ಸ.ಹಿ.ಪ್ರಾ ಶಾಲೆ, ಅರಳಳ್ಳಿ ತಾಲ್ಲೂಕು ಸಿಂಧನೂರಿನಲ್ಲಿ ಸ್ವಾಮಿ ವಿವೇಕಾನಂದ ಸ್ಕೌಟ್ ಘಟಕವನ್ನು ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಸ್ಕೌಟ್ ಘಟಕದ ಸ್ವಾಮಿ ವಿವೇಕಾನಂದರ ಹೆಸರಿನ ನಾಮಫಲಕವನ್ನು ಅನಾವರಣಗೊಳಿಸುವುದರ ಮೂಲಕ ಶ್ರೀ ರಾವುತ್ ರಾವ್ ಬರೂರ ಡಿ.ಓ.ಸಿ. ಹಾಗೂ ಎಸ್.ಡಿ.ಎಂ.ಸಿ. ಅಧ್ಯಕ್ಷರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶಾಲೆಯ ಆವರಣದಲ್ಲಿ ಸಸಿಗಳನ್ನು ನೆಡುವುದರ ಮೂಲಕ ಸ್ಕೌಟ್ಸ್‌ಗಳಲ್ಲಿ ಪರಿಸರದ ಪ್ರಜ್ಞೆ ಮೂಡಿಸಲಾಯಿತು. ಈ ಸಂದರ್ಭದಲ್ಲಿ ಸ್ಕೌಟ್ಸ್ ಮಾಸ್ಟರ್ ಶ್ರೀ ಹನುಮಂತಪ್ಪ, ಎಸ್.ಡಿ.ಎಂ.ಸಿ. ಸದಸ್ಯರು ಊರಿನ ಮುಖಂಡರು, ಶಾಲಾ ಮುಖ್ಯೋಪಾಧ್ಯಾಯಿನಿ ಶ್ರೀಮತಿ ವೀಣಾ, ಶಿಕ್ಷಕ ವೃಂದದವರು ಹಾಗೂ ವಿದ್ಯಾರ್ಥಿಗಳು ಭಾಗವಹಿಸಿದ್ದರು.

## ಬೆಳಗಾವಿ

ದಿನಾಂಕ : 08-02-2013 ರಂದು ಮೂಡಲಗಿ ವಲಯದಲ್ಲಿ ಸ್ಕೌಟ್ಸ್-ಗೈಡ್ಸ್ ಘಟಕಗಳ ನವೀಕರಣ ಸಭೆ ಹಾಗೂ ಮುಖ್ಯೋಪಾಧ್ಯಾರುಗಳ ಸಭೆಯನ್ನು ಆಯೋಜಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ವಹಿಸಿದ್ದರು. ಶ್ರೀ ನಾಗೇಶ್ ಶಿವಾಪುರ ರವರು ಸ್ಕೌಟಿಂಗ್ ಶಿಕ್ಷಣದ ಬಗ್ಗೆ ವಿವರವಾದ ಮಾಹಿತಿ ನೀಡಿ ಸದರಿ ವಲಯದ ಮುಖ್ಯೋಪಾಧ್ಯಾರುಗಳು ತಮ್ಮ ತಮ್ಮ ಶಾಲೆಯಲ್ಲಿ ಸ್ಕೌಟ್-ಗೈಡ್, ಕಬ್, ಬುಲ್‌ಬುಲ್ ತಂಡಗಳನ್ನು ಪ್ರಾರಂಭಿಸುವಂತೆ ಪ್ರೇರಣಾತ್ಮಕ ಮಾತುಗಳನ್ನು ನುಡಿದರು. ಸಭೆಯಲ್ಲಿ 100 ಸ್ಕೌಟರ್-ಗೈಡರ್‌ಗಳು, ಮುಖ್ಯೋಪಾಧ್ಯಾಯರುಗಳು ಭಾಗವಹಿಸಿದ್ದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಬಿ.ಎಂ. ನಿಡೋಣಿ ಸ್ವಾಗತಿಸಿ ವಂದಿಸಿದರು.

ದಿನಾಂಕ 11-02-2013 ರಂದು ಬೈಲಹೊಂಗಲ ತಾಲ್ಲೂಕಿನ ಸ್ಥಳೀಯ ಸಂಸ್ಥೆಯ ಸ್ಕೌಟ್-ಗೈಡ್ ಶಿಕ್ಷಕರುಗಳ ಸಮಾವೇಶದ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬಿ.ಎಚ್. ಮಿಲ್ಲಾನಟ್ಟಿ ವಹಿಸಿದ್ದರು. ಸ್ಕೌಟ್-ಗೈಡ್ ಚಟುವಟಿಕೆಗಳ ಕುರಿತು ಮಾತನಾಡುತ್ತ ಸ್ಕೌಟ್-ಗೈಡ್ ತರಬೇತಿ ಪಡೆದ ಶಿಕ್ಷಕ/ಶಿಕ್ಷಕಿಯರು ತಮ್ಮ ಶಾಲೆಗಳಲ್ಲಿ ಕಡ್ಡಾಯವಾಗಿ ಘಟಕಗಳನ್ನು ಪ್ರಾರಂಭಿಸುವಂತೆ ಪ್ರೇರೇಪಣಾ ಮಾತುಗಳನ್ನು ನುಡಿದರು. ಜಿಲ್ಲಾ ಸಂಘಟಕ ಶ್ರೀ ಡಿ.ಬಿ. ಅತ್ತಾರ, ಉಪಸ್ಥಿತರಿದ್ದರು. ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಐ.ಆರ್. ಜಂಗಿಮಠ ರವರು ಸ್ವಾಗತಿಸಿದರು. ಎಲ್.ಎ. ಕಾರ್ಯಾಧ್ಯಕ್ಷರಾದ ಶ್ರೀ ಎಸ್.ಎಸ್. ಬಳಿಗಾರ ವಂದಿಸಿದರು. ಸಭೆಯಲ್ಲಿ ಒಟ್ಟು 25 ಜನ ಸ್ಕೌಟರ್ ಗೈಡರ್ ಹಾಜರಿದ್ದರು.

ದಿನಾಂಕ 21-02-2013 ರಂದು ಹುಕ್ಕೇರಿ ತಾಲ್ಲೂಕಿನಲ್ಲಿ ಸ್ಕೌಟ್-ಗೈಡ್ ರ್‍ಯಾಲಿಯನ್ನು ಆಯೋಜಿಸಲಾಗಿತ್ತು. ರ್‍ಯಾಲಿಯನ್ನು ಜಿಲ್ಲಾ ಸ್ಕೌಟ್ ಆಯುಕ್ತರು, ಕ್ಷೇತ್ರಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಬಿ. ಮನ್ನಿಕೇರಿ, ಉದ್ಘಾಟಿಸಿದರು. ಒಟ್ಟು 150 ಸ್ಕೌಟ್ಸ್-ಗೈಡ್ಸ್‌ಗಳು, 15 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು. ಶ್ರೀ ನಾಗೇಶ ಶಿವಾಪುರ ರವರು ರ್‍ಯಾಲಿಯ ನೇತೃತ್ವ ವಹಿಸಿದ್ದರು. ಕಾರ್ಯದರ್ಶಿ ಶ್ರೀಮತಿ ಲಕ್ಷ್ಮೀ ಮಂಗಿ ಉಪಸ್ಥಿತರಿದ್ದರು.

ದಿನಾಂಕ 22-02-2013 ರಂದು ಬೆಳಗಾವಿ ನಗರ ವಲಯ ಜಿ.ಎ. ಪ್ರೌಢಶಾಲೆಯಲ್ಲಿ ಬಿ.ಪಿ.ಯವರ ದಿನ ಮತ್ತು ಪಥಚಲನವನ್ನು ಆಯೋಜಿಸಿದ್ದರು. ಧ್ವಜಾರೋಹಣ ಕಾರ್ಯಕ್ರಮದಲ್ಲಿ ಜಿಲ್ಲಾ ಗೈಡ್ ಆಯುಕ್ತರು ಮತ್ತು ಶಿಕ್ಷಣಾಧಿಕಾರಿಗಳು ಆದ ಶ್ರೀಮತಿ ಉಷಾ. ಬಿ. ಗಂಜೀಗಟ್ಟಿ, ಆರೋಗ್ಯ ಇಲಾಖೆಯ ಆರೋಗ್ಯ ಶಿಕ್ಷಣಾಧಿಕಾರಿಗಳಾದ ಶ್ರೀ ಹೊಸಮನಿ ಪ್ರೌಢಶಾಲೆಯ ಉಪ ಪ್ರಾಂಶುಪಾಲರಾದ ಶ್ರೀ ಎ.ಎಸ್. ಡಂಗಿ, ಕಾಲೇಜಿನ ಪ್ರಾಚಾರ್ಯರಾದ ಶ್ರೀ ಹಳ್ಳೀರಾ ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ ಉಪಸ್ಥಿತರಿದ್ದರು.

ನಂತರ ಪ್ರಾರಂಭವಾದ ಪಥಚಲನೆಗೆ ಸದರಿ ಅತಿಥಿ ಮಹೋದಯರು ಚಾಲನೆ ನೀಡಿದರು. ಪಥಚಲನೆಯಲ್ಲಿ ಒಟ್ಟು 600 ಸ್ಕೌಟ್ಸ್-ಗೈಡ್ಸ್‌ಗಳು 25 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

ಮಧ್ಯಾಹ್ನ 3 ಗಂಟೆಗೆ ನಡೆದ ಸಮಾರೋಪ ಸಮಾರಂಭದಲ್ಲಿ ಡಯಟ್ ಪ್ರಾಂಶುಪಾಲರಾದ ಶ್ರೀ ಆರ್.ಜಿ. ಕೆಂಚರೆಡ್ಡಿಯವರು ಅಧ್ಯಕ್ಷತೆ ವಹಿಸಿದ್ದರು. ಜಿ.ಎ. ಪ್ರೌಢಶಾಲೆ ಉಪ ಪ್ರಾಂಶುಪಾಲರು, ಕಾಲೇಜಿನ ಪ್ರಾಚಾರ್ಯರು, ಮಹಿಳಾ ವಿದ್ಯಾಲಯದ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಆಶಾ, ಬಿ. ನೇಸರತರ, ಜಿಲ್ಲಾ ಸಂಘಟಕ, ಶ್ರೀ ಡಿ.ಬಿ. ಅತ್ತಾರ ಉಪಸ್ಥಿತರಿದ್ದರು.

## ಬೀದರ್

ದಿನಾಂಕ 11-02-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬಸವ ಕಲ್ಯಾಣ ತಾಲ್ಲೂಕು ರ್‍ಯಾಲಿಯನ್ನು ನಡೆಸಲಾಯಿತು. ರ್‍ಯಾಲಿ ಉದ್ಘಾಟನೆಯನ್ನು ತಾಲ್ಲೂಕು ದೈಹಿಕ ಶಿಕ್ಷಣ ಅಧಿಕಾರಿಗಳು ನೆರವೇರಿಸಿದರು. ನಂತರ ಪಥಚಲನಕ್ಕೆ ನಗರದ ಸರ್ಕಲ್ ಇನ್ಸ್‌ಪೆಕ್ಟರ್‌ರವರು ಚಾಲನೆಯನ್ನು ನೀಡಿದರು. ಈ ರ್‍ಯಾಲಿಯ ಮೆರವಣಿಗೆಯಲ್ಲಿ 250 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ಅನಂತ ವಿ. ಭಂಡಿಯವರಿಗೆ ಸನ್ಮಾನವನ್ನು ಮಾಡಲಾಯಿತು. ಈ ರ್‍ಯಾಲಿಯಲ್ಲಿ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಯವರಾದ ಶ್ರೀ ದೇಶಪ್ಪ, ಶ್ರೀಬಾಬುರಾವ ನಿಂಬೂರಿ, ಜಿಲ್ಲಾ ತರಬೇತಿ ಆಯುಕ್ತರು ಶ್ರೀ ಅನಿಲಶಾಸ್ತ್ರಿ, ಬಿ.ಆರ್.ಸಿ. ಭಾಗವಹಿಸಿದ್ದರು.

ದಿನಾಂಕ 13-02-2013 ರಿಂದ 19-02-2013 ರ ವರೆಗೆ ಮುರಾರ್ಜಿ ದೇಸಾಯಿ ವಸತಿ ಶಾಲೆ ಬಗದಲ್‌ತಾಂಡಾ ತಾಲ್ಲೂಕು ಬೀದರ ಜಿಲ್ಲೆಯಲ್ಲಿ ಮೂಲ ತರಬೇತಿ ಶಿಬಿರವನ್ನು ನಡೆಸಲಾಯಿತು.

ಸ್ಕೌಟ್ ವಿಭಾಗಕ್ಕೆ ಶಿಬಿರದ ನಾಯಕರಾಗಿ ಶ್ರೀ ಬಾಬುರಾವ ನಿಂಬೂರೆ, ಗೈಡ್ ವಿಭಾಗಕ್ಕೆ ಶ್ರೀಮತಿ ಮಂಜುಳ ಎ.ಎಸ್.ಓ.ಸಿ., ನಾಯಕರುಗಳಾಗಿದ್ದರು ಗೈಡ್ ವಿಭಾಗಕ್ಕೆ 20 ಶಿಕ್ಷಕಿಯರು, ಸ್ಕೌಟ್ ವಿಭಾಗಕ್ಕೆ 27 ಶಿಕ್ಷಕರು ಭಾಗವಹಿಸಿದ್ದರು.

ದಿನಾಂಕ 22-02-2013 ರಂದು ಸ್ಕೌಟ್ಸ್ ಸಂಸ್ಥಾಪಕರಾದ ಲಾಡ್ ಬೇಡನ್ ಪೊವೆಲ್ ರವರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಗುರುನಾನಕ್ ಪಬ್ಲಿಕ್ ಶಾಲೆಯ ಮುಖ್ಯೋಪಾಧ್ಯಾಯರು ಸಂಸ್ಥಾಪಕರಾದ ಬಿ.ಪಿ. ರವರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿ ಮಾತನಾಡುತ್ತಾ ಎಲ್ಲಾ ಸ್ಕೌಟ್ಸ್ ಗೈಡ್ಸ್‌ಗಳು ಅವರು ಹಾಕಿಕೊಟ್ಟ ಮಾರ್ಗವನ್ನು ಅನುಸರಿಸಲು ಕರೆಯಿತ್ತರು. ನಂತರ ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ., ರವರು ಬಿ.ಪಿ.ರವರು ನಡೆದು ಬಂದ ಜೀವನಶೈಲಿ ಹಾಗೂ ಅವರು ಗೈದ ಕಾರ್ಯಸಾಧನೆಗಳನ್ನು ತಿಳಿಸಿದರು. ಈ ಕಾರ್ಯಕ್ರಮದಲ್ಲಿ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಹಾಗು ಗೈಡ್ ಕ್ಯಾಪ್ಟನ್, ಸ್ಕೌಟ್ ಮಾಸ್ಟರ್‌ಗಳು ಭಾಗವಹಿಸಿದ್ದರು.

ದಿನಾಂಕ 19-02-2013 ರಂದು ಶಿವಾಜಿ ಜಯಂತಿಯನ್ನು ಆಚರಿಸಲಾಯಿತು. ಬೆಳಗ್ಗೆ ಶಿವಾಜಿಯ ಭಾವಚಿತ್ರಕ್ಕೆ ಪೂಜೆಯನ್ನು ನೆರವೇರಿಸಲಾಯಿತು. ನಂತರ ಭವ್ಯ ಮೆರವಣಿಗೆಯಲ್ಲಿ ಭಾಗವಹಿಸಲಾಯಿತು.

## ಹಾಸನ

ದಿನಾಂಕ 21-02-2013 ರಂದು ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು. ಸುಕ್ಷೇತ್ರ ಯಾದಾಪುರದಲ್ಲಿ ಶ್ರೀ ಜೇನುಕಲ್ಲು ಸಿದ್ದೇಶ್ವರ ಸ್ವಾಮಿಯ ದೇವಾಲಯದ ಆವರಣದಲ್ಲಿ 75 ಸ್ಕೌಟ್‌ಗಳು ಹಾಗೂ 50 ಗೈಡ್‌ಗಳೊಂದಿಗೆ ಸೇರಿ ಸಮುದಾಯ ಸೇವಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಅರಸೀಕೆರೆ ತಾಲ್ಲೂಕಿನ ಎ.ಡಿ.ಸಿ. ಯವರಾದ ಶ್ರೀ ವಿಷ್ಣುಮೂರ್ತಿ ಭಟ್, ಶ್ರೀಮತಿ ಕಾಮೇಶ್ವರಿ ಗಂಗಾಧರ್ ಹಾಗೂ ಇತರ ಸ್ಕೌಟರ್ಸ್-ಗೈಡರ್ಸ್ ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಶ್ರೀ ಸಲೀಲಾ ಮಾಹೇಶ್ವರ, ಕಾರ್ಯದರ್ಶಿಗಳು ಶಿಬಿರದ ನೇತೃತ್ವ ವಹಿಸಿದ್ದರು.

ಅರಸೀಕೆರೆ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಪಿ. ನಟರಾಜ್ ರವರು ಶಿಬಿರಕ್ಕೆ ಭೇಟಿ ನೀಡಿ ಸ್ಕೌಟ್ಸ್ ಗೈಡ್ಸ್‌ಗಳ ಕಾರ್ಯಕ್ರಮ ಚಟುವಟಿಕೆಗಳನ್ನು ಪ್ರಶಂಶಿಸಿದರು.

ದಿನಾಂಕ 23-02-2013 ರಂದು ಸಾಧನಾ ಗೈಡ್ ಕಂಪನಿ, ಶ್ರೀ ವೆಂಕಟೇಶ್ವರ ಟ್ರಸ್ಟ್ ಚಿಟ್ಟನಹಳ್ಳಿ ಬೋರೆ, ಹೊಳೆನರಸಿಪುರ, ಇವರ ವತಿಯಿಂದ ಲಾರ್ಡ್ ಬೇಡನ್ ಪೊವೆಲ್ ರವರ ಹಾಗೂ ಲೇಡಿ ಒಲೆವ್. ಬೇಡನ್ ಪೊವೆಲ್ ರವರ ಜನ್ಮ ದಿನಾಚರಣೆಗಳನ್ನು ಹಮ್ಮಿಕೊಳ್ಳಲಾಯಿತು.

ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಗೋಪಾಲ್ ನಾಯಕ್, ಆರಕ್ಷಕ ವೃತ್ತ ನಿರೀಕ್ಷಕರು ಗ್ರಾಮಾಂತರ ಪೋಲೀಸ್ ಠಾಣೆ ಹೊಳೆನರಸೀಪುರ ಇವರು ಮಾತನಾಡುತ್ತಾ ಮಕ್ಕಳಿಗೆ ಧೈರ್ಯ ಸಾಹಸ ಮತ್ತು ಶೌರ್ಯಗಳ ಬಗ್ಗೆ ಮಕ್ಕಳಿಗೆ ಸ್ಫೂರ್ತಿ ನೀಡಿದರು.

ಈ ಕಾರ್ಯಕ್ರಮದಲ್ಲಿ ಅತಿಥಿಗಳಾಗಿ ಆಗಮಿಸಿದ್ದ ಜಿ. ನಾರಾಯಣ ಶೆಟ್ಟಿ, ಕಾರ್ಯದರ್ಶಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ, ಹೊಳೆನರಸೀಪುರ ಇವರು ಸ್ಕೌಟ್ಸ್ ಸಂಸ್ಥೆಯ ಹುಟ್ಟು, ಬೆಳವಣಿಗೆ ಬಗ್ಗೆ ವಿವರಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಆರ್. ಚಂದ್ರಶೇಖರ್ ರವರು ಮಾತನಾಡುತ್ತಾ ಮಕ್ಕಳಿಗೆ ಇಂತಹ ಸಂಸ್ಥೆಗಳು ಇಂದಿನ ವಾತಾವರಣಕ್ಕೆ ಅತ್ಯಗತ್ಯ ಎಂದು ಹೇಳಿ, ಮುಂದಿನ ವರ್ಷದಿಂದ ತಮ್ಮ ಶಾಲೆಯಲ್ಲಿ ಸ್ಕೌಟ್ ದಳವನ್ನು ಪ್ರಾರಂಭಿಸುತ್ತೇವೆ ಎಂದು ತಿಳಿಸಿದರು.

ಈ ಕಾರ್ಯಕ್ರಮದ ಸ್ವಾಗತ ಮತ್ತು ನಿರೂಪಣೆಯನ್ನು ಗೈಡ್ ನಾಯಕಿಯಾದ ಶ್ರೀಮತಿ ಕುಮುದಾ ಆರ್. ರವರು ನೆರವೇರಿಸಿದರು. ಈ ಕಾರ್ಯಕ್ರಮದಲ್ಲಿ ನೇತಾಜಿ ಮುಕ್ತ ರೋವರ್ ತಂಡದ ರೋವರ್‌ಗಳಾದ ಅರುಣ್‌ಕುಮಾರ್, ಮಹೇಶ್, ಮೋಹನ, ಶಶಿಧರ್, ಗಿರೀಶ್, ದೇವರಾಜು, ಪ್ರಸನ್ನ ರವರುಗಳು ಭಾಗವಹಿಸಿದ್ದರು.

ದಿನಾಂಕ 02-03-2013 ರಂದು ಸರ್ಕಾರಿ ಕಲಾ ಕಾಲೇಜಿನಲ್ಲಿ ಸ್ಕೌಟ್ಸ್-ಗೈಡ್ಸ್ ಮತ್ತು ಶ್ರೀ ಜಯಚಾಮರಾಜೇಂದ್ರ ಆಸ್ಪತ್ರೆ ಇವರ ಸಂಯುಕ್ತಾಶ್ರಯದಲ್ಲಿ ರಕ್ತದಾನ ಮತ್ತು ರಕ್ತಗುಂಪು ಪರೀಕ್ಷೆಯನ್ನು ಹಮ್ಮಿಕೊಳ್ಳಲಾಗಿದ್ದು ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ॥ ಐ.ಎಂ. ಮೋಹನ್ ರವರು ವಹಿಸಿದ್ದರು. ಈ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಡಾ॥ ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಶ್ರೀಮತಿ ಶೈಲಾ ಅಭಿನಂದನ್ ಜಿಲ್ಲಾ ಆಯುಕ್ತೆ (ಗೈ) ಡಾ॥ ನಾಗೇಶ್, ಪ್ರೊ. ಉದಯ್ ಕುಮಾರ್, ಪ್ರೊ. ಹೇಮಾವತಿ ರವರು ಭಾಗವಹಿಸಿದ್ದರು.

ಡಾ. ನಾಗೇಶ್ ಮಾತನಾಡಿ ರಕ್ತದ ಸಂಪೂರ್ಣ ಮಾಹಿತಿಯನ್ನು ತಿಳಿಸಿದರು. ಡಾ. ವೈ.ಎಸ್. ವೀರಭದ್ರಪ್ಪನವರು ರಕ್ತದಾನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಪಾತ್ರದ ಬಗ್ಗೆ ಹೇಳಿದರು. ಶ್ರೀಮತಿ ಶೈಲಾ ಅಭಿನಂದನ್ ರವರು ರಕ್ತದಾನದ ಅರಿವಿನ ಬಗ್ಗೆ ತಿಳಿಸಿದರು. ಇದಾದ ನಂತರ ಸ್ಕೌಟ್ಸ್-ಗೈಡ್ಸ್‌ಗಳು ಸ್ವಯಂ ಪ್ರೇರಣೆಯಿಂದ ರಕ್ತದಾನ ಮಾಡಿದರು. ಹಾಸನಾಂಬ ರೋವರ್ಸ್ ಮತ್ತು ರೇಂಜರ್ಸ್‌ಗಳು ಹಾಗೂ ರೋವರ್ ಲೀಡರ್ಸ್‌ಗಳಾದ ಪ್ರೊ. ಉದಯ್ ಕುಮಾರ್ ರಕ್ತದಾನ ಮಾಡಿದರು. ಎಲ್ಲಾ ವಿದ್ಯಾರ್ಥಿಗಳ ರಕ್ತದ ಗುಂಪು ಪರೀಕ್ಷೆ ಮಾಡಲಾಯಿತು.

ದಿನಾಂಕ 03-03-2013 ರಿಂದ 05-03-2013 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಮೈಸೂರು ವಿಭಾಗ ಮಟ್ಟದ ಸ್ಥಳೀಯ ಸಂಸ್ಥೆಗಳ, ಕಾರ್ಯದರ್ಶಿಗಳ, ಜೊತೆ ಕಾರ್ಯದರ್ಶಿಗಳ, ಖಜಾಂಚಿಗಳ ಮತ್ತು ಸಹಾಯ ಜಿಲ್ಲಾ ಆಯುಕ್ತರುಗಳ ಸಮಾವೇಶವನ್ನು ಗೈಡಿಂಗ್ ಶತಮಾನೋತ್ಸವದ ಪ್ರಯುಕ್ತ ಹಾಸನ ಜಿಲ್ಲಾ ಸಂಸ್ಥೆಯ ಸಹಕಾರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಭವನ ಹಾಸನ ಇಲ್ಲಿ ಸಂಘಟಿಸಲಾಯಿತು.

ಈ ಕಾರ್ಯಕ್ರಮದಲ್ಲಿ ಮೈಸೂರು ವಿಭಾಗದ 7 ಜಿಲ್ಲೆಗಳ 36 ಸ್ಥಳೀಯ ಸಂಸ್ಥೆಗಳಿಂದ 64 ಪದಾಧಿಕಾರಿಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ಜಾನಕಿ ವೇಣುಗೋಪಾಲ್, ಎಸ್.ಓ.ಸಿ.,(ಜಿ.) ಶ್ರೀಮತಿ ಎಸ್.ಕೆ. ಪ್ರಭಾ, ಶ್ರೀ ಎನ್. ಶ್ರೀನಿವಾಸನ್, ಶ್ರೀಮತಿ ಶಾಂತಾ ಗಿರಿಯಣ್ಣ, ಶ್ರೀ ಎಂ. ಪ್ರಭಾಕರ್ ಭಟ್, ಶ್ರೀ ಎಲ್.ಟಿ. ಲೋಕೇಶ್, ಶ್ರೀಮತಿ ಕಾಂಚನಮಾಲ ಹಾಗೂ ಶ್ರೀ ಕಿರಣ ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿ ಸಹಕರಿಸಿರುತ್ತಾರೆ. ಶ್ರೀ ಸುರೇಶ್ ಗುರೂಜಿ ಉಪಾಧ್ಯಕ್ಷರು ಇವರು ಮನಸ್ಸಿನ ಒತ್ತಡಗಳ ನಿವಾರಣೆ ಬಗ್ಗೆ ಉಪನ್ಯಾಸ ನೀಡಿದರು.

ದಿನಾಂಕ 03-03-2013 ರಂದು ಪೂರ್ವಾಹ್ನ ಡಾ॥ ವೈ.ಎಸ್. ವೀರಭದ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀ ಪ್ರಕಾಶ್ ಎಸ್. ಯಾಜಿ ಅವರು ದೀಪ ಬೆಳಗಿಸಿ ಸಮಾವೇಶವನ್ನು ಉದ್ಘಾಟಿಸಿದರು. ಶ್ರೀಮತಿ ಲೀಲಾವತಿ ಅಧ್ಯಕ್ಷರು ಪತ್ರಕರ್ತರ ಸಂಘ ಹಾಸ ಜಿಲ್ಲೆ, ಇವರು ಅತಿಥಿಗಳಾಗಿ ಭಾಗವಹಿಸಿ ಶುಭ ಹಾರೈಸಿದರು. ಈ ಸಮಾವೇಶಕ್ಕೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ.ಬಿ. ಷಣ್ಮುಖಪ್ಪ ಭೇಟಿ ನೀಡಿ ರಾಜ್ಯದಲ್ಲಿ ಸ್ಕೌಟಿಂಗ್ ಗೈಡಿಂಗ್ ಬೆಳವಣಿಗೆಗೆ ಹಾಗೂ ಸ್ಥಳೀಯ / ಜಿಲ್ಲಾ ಮಟ್ಟದಲ್ಲಿ ಆಗಬೇಕಾದ ಅಭಿವೃದ್ಧಿ ಕಾರ್ಯಗಳ ಬಗ್ಗೆ ಶಿಬಿರಾರ್ಥಿಗಳಿಗೆ ಯೋಗ್ಯ ಮಾರ್ಗದರ್ಶನ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಬಸವರಾಜ್ ಇವರು ಸ್ಕೌಟಿಂಗ್ ಗೈಡಿಂಗ್ ಚಟುವಟಿಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಶಿಕ್ಷಣ ಇಲಾಖೆಯಿಂದಾಗುವ ಪೂರ್ಣ ಸಹಕಾರ ಪ್ರೋತ್ಸಾಹ ನೀಡುವುದಾಗಿ ತಿಳಿಸಿದರು. ಶ್ರೀಮತಿ ಲತಾ ಶಿಕ್ಷಣಾಧಿಕಾರಿ ಸ್ಕೌಟ್-ಗೈಡ್ ಶಿಸ್ತಿನ ಬಗ್ಗೆ ತಿಳಿಸಿ ಶುಭಹಾರೈಸಿದರು. ಈ ಸಂದರ್ಭದಲ್ಲಿ ಜಿಲ್ಲೆಯಲ್ಲಿ 40 ವರ್ಷಕ್ಕಿಂತ ಹೆಚ್ಚಿನ ಸೇವೆ ನೀಡಿದ ಶ್ರೀ ಎಚ್.ಎಂ. ಗೌಡಯ್ಯ ರವರನ್ನು ರಾಜ್ಯ ಸಂಸ್ಥೆಯ ಮೆಡಲ್ ಆಫ್ ಮೆರಿಟ್ ಪದಕವನ್ನು ನೀಡಿ ಗೌರವಿಸಲಾಯಿತು.

ಶಿಬಿರದ ಸಮಾರೋಪ ಸಮಾರಂಭ ದಿನಾಂಕ 05-03-2013 ರಂದು ಅಪರಾಹ್ನ ಜರುಗಿತು. ಮುಖ್ಯ ಅತಿಥಿಗಳಾಗಿ ಶ್ರೀ ಪುಟ್ಟರಾಸು ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹಾಸನ ಇವರು ಭಾಗವಹಿಸಿ ಸ್ಕೌಟಿಂಗ್-ಗೈಡಿಂಗ್ ಚಳುವಳಿಯ ಶಿಸ್ತು, ಸಂಘಟನೆ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ, ಶುಭಾಶಯಗಳನ್ನು ತಿಳಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ವೈ.ಎಸ್. ವೀರಭದ್ರಪ್ಪ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ ಸ್ವಾಗತಿಸಿದರು. ಶ್ರೀಮತಿ ಜಾನಕಿ ವೇಣುಗೋಪಾಲ್ ಎಸ್.ಓ.ಸಿ.(ಗೈ) ಶ್ರೀ ಪ್ರಕಾಶ್ ಯಾಜಿ ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಜಿಲ್ಲಾ ಸಂಸ್ಥೆ ವತಿಯಿಂದ ಧನ್ಯವಾದ ನೀಡಿದರು. ಶ್ರೀ ಪ್ರಕಾಶ್ ಯಾಜಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಜಿಲ್ಲಾ ಸಂಸ್ಥೆ ವತಿಯಿಂದ ವಂದಿಸಿದರು. ಶ್ರೀ ಎಲ್.ಟಿ. ಲೋಕೇಶ್ ಕಾರ್ಯಕ್ರಮ ನಿರ್ವಹಿಸಿದರು. ಶ್ರೀ ಎಂ. ಪ್ರಭಾಕರ್ ಭಟ್ ಶಿಬಿರದ ವರದಿ ನೀಡಿದರು. ದೀರ್ಘ ಸೇವೆ ಸಲ್ಲಿಸಿದ ಶ್ರೀಮತಿ ಜಾನಕಿ ವೇಣುಗೋಪಾಲ್ ಹಾಗೂ ಜಿಲ್ಲಾ ತರಬೇತಿ ಆಯುಕ್ತರು(ಗೈಡ್ಸ್) ಕಾಂಚನಮಾಲ ರವರಿಗೆ ಜಿಲ್ಲಾ ಸಂಸ್ಥೆ ವತಿಯಿಂದ ಗೌರವಿಸಲಾಯಿತು.

## ಗದಗ

ದಿನಾಂಕ 03-03-2013 ರಿಂದ 05-03-2013 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಗದಗ ಹಾಗೂ ಕೆ.ವಿ.ಎಸ್.ಆರ್.ಸ.ಪ.ಪೂ. ಕಾಲೇಜ್, ತಿಮ್ಮಾಪೂರ ತಾಲ್ಲೂಕು (ಗದಗ ಗ್ರಾಮೀಣ) ಇವುಗಳ ಸಂಯುಕ್ತಾಶ್ರಯದಲ್ಲಿ ರೋವರ್‌ಗಳು ಪರಿಸರ ಮಾಲಿನ್ಯ ಹಾಗೂ ನೀರಿನ ಬಳಕೆ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ತಿಮ್ಮಾಪುರ ತಾಲ್ಲೂಕಿನ ಗದಗ ಗ್ರಾಮೀಣ ದಿಂದ ಲಕ್ಕುಂದಿ ಡಂಬಳ, ಮುಂಡರಗಿ ಹಾಗೂ ಕೋರ್ಲಹಳ್ಳಿ ಮಾರ್ಗವಾಗಿ ಸುಕ್ಷೇತ್ರ ಶ್ರೀ ವೀರಭದ್ರೇಶ್ವರ ದೇವಸ್ಥಾನ ತಾ॥ ಮುಂಡರಗಿಯವರೆಗೆ ಸೈಕಲ್ ಜಾತಾವನ್ನು ಹಮ್ಮಿಕೊಂಡಿದ್ದರು. ಇದರ ಉದ್ಘಾಟನೆಯನ್ನು ಹಿರಿಯ ಶಿಕ್ಷಕರಾದ ಶ್ರೀ ಆರ್.ಪಿ. ಕುರಡಗಿ ಹಾಗೂ ಉಪನ್ಯಾಸಕರು ಶಶಿಧರ ಕುರಿ ನೆರವೇರಿಸಿದರು. ರೋವರ್ ಸ್ಕೌಟ್ ಲೀಡರ್ ಶ್ರೀ ಎಸ್.ಎಚ್. ಮಲ್ಲಾಪುರ ರವರು ರೋವರ್‌ಗಳಿಗೆ ಶುಭ ಹಾರೈಸಿದರು. ಜಿಲ್ಲಾ ಸಂಘಟಕರಾದ ಶ್ರೀ ಮಲ್ಲೇಶಪ್ಪ ಕೆ.ಟಿ. ಹಾಗೂ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್.ಗುಜ್ಜು ಮಾಗಡಿ ಶಿಬಿರದ ನಾಯಕರಾದ ಶ್ರೀ ಬಾಬುರಾವ್ ನಿಂಬೋರೆ ಇವರು ರೋವರ್‌ಗಳ ಸೇವೆಯ ಬಗ್ಗೆ ಪ್ರಶಂಸೆಯ ಮಾತುಗಳನ್ನು ಹೇಳಿದರು.





**Participants of Karnataka State Level Himalaya Wood Badge Holders Meet-I held at State Training Centre, Jeedimetla, Hyderabad from 28th to 31st January 2013.**




**Participants of Karnataka State Level Himalaya Wood Badge Holders Meet - II held at State Training Centre, Rambaug, Bhor Village, PUNE from 17th to 20th February 2013.**



ಇತ್ತೀಚೆಗೆ ಶಿವಮೊಗ್ಗ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ನಡೆದ ತೃತೀಯ ಸೋಪಾನ ಪರೀಕ್ಷಾ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಶ್ರೀ ವಿಫುಲ್ ಬನ್ಸಾಲ್, ಭಾ.ಆ.ಸೇ., ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಜಿಲ್ಲಾ ಸಂಸ್ಥೆ ಶಿವಮೊಗ್ಗ ಇವರು ಸ್ಕೌಟುಗಳಿಗೆ "ಜಿಲ್ಲಾ ಪುರಸ್ಕಾರ ಪ್ರಶಸ್ತಿ" ಪ್ರದಾನ ಮಾಡುತ್ತಿರುವುದು.



22 ಫೆಬ್ರವರಿ 2013ರಂದು ಧಾರವಾಡದಲ್ಲಿ ಜರುಗಿದ ಸಂಸ್ಥಾಪಕರ ದಿನಾಚರಣೆಯಂದು ಮುಖ್ಯ ಅತಿಥಿಗಳಾಗಿ ಶ್ರೀ ಎ.ಎನ್. ಪಾಟೀಲ್, ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ರವರು ಜ್ಯೋತಿ ಬೆಳಗಿಸಿ ಕಾರ್ಯಕ್ರಮ ಉದ್ಘಾಟಿಸಿದರು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಶ್ರೀ ಬಿ.ಕೆ. ಪಾಟೀಲ್ ಎಲ್.ಟಿ(ಸ್ಕೌಟ್ಸ್) ಹಾಗೂ ಇತರರನ್ನು ಕಾಣಬಹುದು. ಉದ್ಘಾಟನಾ ನಂತರ ನಗರದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಪಥಚಲನ ನಡೆಯಿತು.



22 ಫೆಬ್ರವರಿ 2013ರಂದು ರಾಯಚೂರು ಜಿಲ್ಲೆ ಸಿಂಧನೂರಿನಲ್ಲಿ ಜರುಗಿದ "ವಿಶ್ವ ಚಿಂತನಾ" ದಿನಾಚರಣೆ ಅಂಗವಾಗಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ, ಬಿ.ಪಿ.ಯವರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿದರು. ಚಿತ್ರದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಇತ್ತೀಚೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೊಮ್ಮವಾರದಲ್ಲಿ ಜರುಗಿದ "ವಿವೇಕ ಸಪ್ತಾಹ" ಕಾರ್ಯಕ್ರಮದಲ್ಲಿ ಭಾಗವಹಿಸಿದ ಶ್ರೀ ನಾಗರಾಜ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಶರಣಪ್ಪ ಕಂಬಳಿ, ಜಿಲ್ಲಾ ಕಾರ್ಯದರ್ಶಿ ಹಾಗೂ ಇತರ ಪದಾಧಿಕಾರಿಗಳನ್ನು ಕಾಣಬಹುದು.



22 ಫೆಬ್ರವರಿ 2013 ರಂದು ಬಾಗಲಕೋಟೆ ಜಿಲ್ಲಾಸಂಸ್ಥೆಯ ಆಶ್ರಯದಲ್ಲಿ ಜರುಗಿದ ಸಂಸ್ಥಾಪಕರ ದಿನಾಚರಣೆಯ ಉದ್ಘಾಟನೆಯನ್ನು ಶ್ರೀ ಎಂ.ಎಸ್. ಅಂಗಡಿ, ಪ್ರಾಚಾರ್ಯರು, ಬಾಲಕಿಯರ ಪ.ಪೂ.ಕಾಲೇಜು, ಇವರು ನೆರವೇರಿಸಿದರು. ಚಿತ್ರದಲ್ಲಿ ಉಪಪ್ರಾಚಾರ್ಯರಾದ ಶ್ರೀ ಮುಗಳಖೋಡ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಜಿ.ಬಿ. ಇದ್ದಲಗಿ ಹಾಗೂ ಇತರ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾಣಬಹುದು.




2ನೇ ಮಾರ್ಚ್ 2013ರಂದು ಹಾಸನ ಜಿಲ್ಲೆ ಹೊಳೆನರಸೀಪುರದ ಶ್ರೀ ನೇತಾಜಿ ರೋವರ್ ಕ್ರೂ ವತಿಯಿಂದ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್‌ಗಳು.




22ನೇ ಫೆಬ್ರವರಿ 2013ರಂದು ಕಾರವಾರ ಜಿಲ್ಲೆ ಹೊನ್ನಾವರದಲ್ಲಿ ಲಾರ್ಡ್ ಬೇಡನ್ ಪೋವೆಲ್ ರವರ 156ನೇ ಜನ್ಮ ದಿನಾಚರಣೆಯ ಅಂಗವಾಗಿ ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿದ ಸ್ಕೌಟ್ಸ್ & ಗೈಡ್ಸ್‌ಗಳು.



22 ಫೆಬ್ರವರಿ 2013 ರಂದು ಚಿಕ್ಕಬಳ್ಳಾಪುರ ಜಿಲ್ಲಾ ಸಂಸ್ಥೆ ಏರ್ಪಡಿಸಿದ ಸಂಸ್ಥಾಪಕರ ದಿನಾಚರಣೆಯಲ್ಲಿ ಜರುಗಿದ ಪಥಚಲನೆಯ ಉದ್ಘಾಟನೆಯನ್ನು ಶ್ರೀ ಎ. ಅಜಿತ್ ಪ್ರಸಾದ್, ಉಪನಿರ್ದೇಶಕರು ಸಾ.ಶಿ. ಇಲಾಖೆ, ಇವರು ನೆರವೇರಿಸಿದರು. ಚಿತ್ರದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳನ್ನು ಕಾಣಬಹುದು.



ಇತ್ತೀಚೆಗೆ ಚಾಮರಾಜನಗರ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ಸಂಸ್ಥಾಪಕರ ದಿನಾಚರಣೆ ಸಂದರ್ಭದಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಜಿ. ನಾಗಶ್ರೀ ರವರು ಮಾತನಾಡುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ. ಆರ್. ಅಶ್ವತ್ಥನಾರಾಯಣ ಹಾಗೂ ಇತರ ಪದಾಧಿಕಾರಿಗಳನ್ನು ಕಾಣಬಹುದು.



ಬಿಜಾಪುರ ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್ ಹಾಗೂ ಗ್ರಾಮ ಪಂಚಾಯತ್ ಅನುದಾನದಲ್ಲಿ ಸಮವಸ್ತ್ರ ವಿತರಿಸುತ್ತಿರುವ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿ (ಸಶಸ್ತ್ರ ಮೀಸಲು ಪಡೆ) ಶ್ರೀ ಎಂ. ಗಂಗಾಧರಪ್ಪ, ಐ.ಪಿ.ಎಸ್., ರವರನ್ನು ಕಾಣಬಹುದು.



ದಿನಾಂಕ 22-02-2013 ರಂದು ಮಧುಗಿರಿ ಜಿಲ್ಲೆ ಶಿರಾ ಸ್ಥಳೀಯ ಸಂಸ್ಥೆ ಏರ್ಪಡಿಸಿದ ಚಿಂತನಾ ದಿನಾಚರಣೆಯಲ್ಲಿ ಪ್ರಾಚಾರ್ಯರಾದ ಶ್ರೀ ಪಿ.ಹೆಚ್. ಮಹೇಂದ್ರಪ್ಪ, ದೈಹಿಕ ಶಿಕ್ಷಣಾಧಿಕಾರಿ ಶ್ರೀ ಸುಭಾಷ್, ಕಾರ್ಯದರ್ಶಿ ಶ್ರೀ ಹನುಮಂತರಾಯ, ಎ.ಡಿ.ಸಿ.,ಗಳಾದ ಶ್ರೀ ಪಾತಲಿಂಗಯ್ಯ, ಶ್ರೀಮತಿ ಲತಾ, ಉಪಪ್ರಾಂಶುಪಾಲರಾದ ಶ್ರೀ ನೀಲಕಂಠಾಚಾರ್ ಹಾಗೂ ಇತರರನ್ನು ಕಾಣಬಹುದು.



ದಿನಾಂಕ 03-03-2013 ರಿಂದ 05-03-2013 ರ ವರೆಗೆ ಗದಗ್ ಜಿಲ್ಲೆಯ ಕೆ.ವಿ.ಎಸ್.ಆರ್. ಪದವಿ ಪೂರ್ವ ಕಾಲೇಜಿನ ರೋವರ್‌ಗಳಿಂದ ಗದಗದಿಂದ ಮುಂಡರಗಿ ತಾಲ್ಲೂಕಿನ ಸುಕ್ಷೇತ್ರ ಶ್ರೀ ವೀರಭದ್ರೇಶ್ವರ ದೇವಸ್ಥಾನದವರೆಗೆ ಸೈಕಲ್ ಜಾಥಾವನ್ನು ಏರ್ಪಡಿಸಲಾಗಿತ್ತು.






ದಿನಾಂಕ 13 ರಿಂದ 19 ಫೆಬ್ರವರಿ 2013 ರವರೆಗೆ ಬೀದರ್ ಜಿಲ್ಲೆಯಲ್ಲಿ ನಡೆದ ಸ್ಕೌಟರ್-ಗೈಡರ್‌ಗಳ ಮೂಲತರಬೇತಿ ಶಿಬಿರಗಳಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳೊಂದಿಗೆ ತರಬೇತುದಾರರು ಹಾಗೂ ಸಂಸ್ಥೆಯ ಜಿಲ್ಲಾ ಪದಾಧಿಕಾರಿಗಳು.





ಇತ್ತೀಚೆಗೆ ದಾವಣಗೆರೆ ಜಿಲ್ಲಾ ಸಂಸ್ಥೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ & ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ಏರ್ಪಡಿಸಿದ್ದ ಮೂಲ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳೊಂದಿಗೆ ಜಿಲ್ಲಾ ಪದಾಧಿಕಾರಿಗಳು ಹಾಗೂ ನಾಯಕರುಗಳನ್ನು ಕಾಣಬಹುದು.



ಬಿಜಾಪುರದಲ್ಲಿ ಜರುಗಿದ 79ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸೇವೆಯಲ್ಲಿ ತೊಡಗಿರುವ ಸ್ಕೌಟರ್ಸ್ - ಗೈಡರ್ಸ್‌ಗಳು.



ಇತ್ತೀಚೆಗೆ ಕೊಪ್ಪಳ ಜಿಲ್ಲೆ ಗಂಗಾವತಿಯಲ್ಲಿ ಜರುಗಿದ ಸಂಸ್ಥಾಪಕರ ದಿನಾಚರಣೆ ಹಾಗೂ ಮಕ್ಕಳ ಮೇಳದಲ್ಲಿ ಭಾಗವಹಿಸಿದ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



HAL Rover Crew Members along with Invitees and Founders of “Mathru Prathisthana”.



ದಿನಾಂಕ 13 ರಿಂದ 19 ಫೆಬ್ರವರಿ 2013 ರವರೆಗೆ ಗುಲ್ಬರ್ಗದಲ್ಲಿ ಜರುಗಿದ ಮೂಲ ತರಬೇತಿ ಶಿಬಿರದ ಸಮಾರೊಪ ಸಮಾರಂಬದಲ್ಲಿ ಶ್ರೀ ಸಿ.ವ್ಹಿ ಹಿರೇಮಠ್, ಜಂಟಿ ನಿರ್ದೇಶಕರು ಸಾ.ಶಿ. ಇಲಾಖೆ, ಪ್ರೊ. ಈ.ಟಿ. ಪುಟ್ಟಯ್ಯ, ಕುಲಪತಿಗಳು ಗುಲಬರ್ಗಾ ವಿಶ್ವವಿದ್ಯಾಲಯ ಹಾಗೂ ಇತರ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾಣಬಹುದು.

## ಚಿಕ್ಕಬಳ್ಳಾಪುರ

ತಾ॥ 22-02-2013 ರಂದು ಚಿಕ್ಕಬಳ್ಳಾಪುರ ಜಿಲ್ಲಾ ಸಂಸ್ಥೆ ಹಾಗೂ ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯ ಅಡಿಯಲ್ಲಿ ಜಿಲ್ಲೆಯ ಉಪನಿರ್ದೇಶಕರ ಕಛೇರಿ ಆವರಣದಲ್ಲಿರುವ ಡಾ॥ ಅಬ್ದುಲ್ ಕಲಾಂ ಸಭಾಂಗಣದಲ್ಲಿ ಸಂಸ್ಥಾಪಕ ಹಾಗೂ ಚಿಂತನಾ ದಿನಾಚರಣೆ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಜಿಲ್ಲೆಯಾದ್ಯಂತ 500ಕ್ಕೂ ಹೆಚ್ಚು ಸ್ಕೌಟ್-ಗೈಡ್ ಹಾಗೂ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಪಥಚಲನೆಯ ಉದ್ಘಾಟನೆಯನ್ನು ಶ್ರೀ ಎ. ಅಜಿತ್ ಪ್ರಸಾದ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕಬಳ್ಳಾಪುರ ರವರು ನೆರವೇರಿಸಿದರು. ಪಥಚಲನೆಯನ್ನು ನಗರದ ಪ್ರಮುಖ ಬೀದಿಗಳಲ್ಲಿ ಹಮ್ಮಿಕೊಳ್ಳಲಾಗಿತ್ತು. ಭಾಗವಹಿಸಿದ ಸ್ಕೌಟ್-ಗೈಡ್‌ಗಳಿಗೆ ಭಾಷಣ, ಚಿತ್ರಕಲೆ, ಬೆಂಕಿ ಇಲ್ಲದೆ ತಿಂಡಿ ತಯಾರಿಸುವುದು, ಗುಡಾರ ನಿರ್ಮಾಣ ಮುಂತಾದ ಸ್ಪರ್ಧೆಗಳನ್ನು ಏರ್ಪಡಿಸಿ ವಿಜೇತರಿಗೆ ಬಹುಮಾನ ನೀಡಲಾಯಿತು. ವಂದನಾರ್ಪಣೆಯನ್ನು ಶ್ರೀ ಡಿ.ಎಸ್. ಮನೋಹರ್, ಜಿಲ್ಲಾ ಕಾರ್ಯದರ್ಶಿಗಳು ನೆರವೇರಿಸಿದರು.

## ಧಾರವಾಡ

ದಿನಾಂಕ 22-02-2013 ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ಮತ್ತು ಲೇಡಿ ಬೇಡನ್ ಪೊವೆಲ್ ರವರ ಜನ್ಮ ದಿನೋತ್ಸವವನ್ನು ಆಚರಿಸಲಾಯಿತು. ಬೆಳಿಗ್ಗೆ ನಗರದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಸಂಸ್ಥಾಪಕರ ಭಾವಚಿತ್ರವನ್ನು ಮೆರವಣಿಗೆಯಲ್ಲಿ ತೆಗೆದುಕೊಂಡು ನಗರದ ರಾಜಬೀದಿಗಳಲ್ಲಿ ಪಥಚಲನೆ ಮಾಡಿದರು. ನಂತರ ವಿವಿಧ ಸ್ಪರ್ಧೆಗಳು ನಡೆದವು.

ಸಂಜೆ ನಡೆದ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ಎ.ಎನ್. ಪಾಟೀಲ ಮಾತನಾಡುತ್ತಾ ಎಲ್ಲಾ ಶಾಲೆ ಮತ್ತು ಕಾಲೇಜುಗಳಲ್ಲಿ ಸ್ಕೌಟಿಂಗ್-ಗೈಡಿಂಗ್ ಕಡ್ಡಾಯಗೊಳಿಸಲಾಗುವುದು ಎಂದು ಹೇಳುತ್ತ, ಜಿಲ್ಲಾ ಸಂಸ್ಥೆಯು ಕೈಕೊಂಡ ಚಟುವಟಿಕೆಗಳನ್ನು ಶ್ಲಾಘಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ಜಿಲ್ಲಾ ಸಂಸ್ಥೆಯು ನಡೆದುಬಂದ ಬಗೆಯನ್ನು ವಿವರಿಸಿದರು. ವಿವಿಧ ಚಟುವಟಿಕೆಗಳಲ್ಲಿ ವಿಜೇತ ರಾದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಶಸ್ತಿಯನ್ನು ನೀಡಲಾಯಿತು. ನಂತರ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಉತ್ತಮ ಮನೋರಂಜನಾ ಚಟುವಟಿಕೆಗಳನ್ನು ಸಾದರ ಪಡಿಸಿದರು.

## ಬಾಗಲಕೋಟೆ

ದಿನಾಂಕ 22-02-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟ್ ಸಂಸ್ಥಾಪಕರಾದ "ಲಾರ್ಡ್ ಬೇಡನ್ ಪೋವೆಲ್" ರವರ ಜನ್ಮ ದಿನಾಚರಣೆಯನ್ನು ಜಿಲ್ಲಾ ಕೇಂದ್ರ ಕಛೇರಿಯಲ್ಲಿ ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಎಂ.ಎಸ್. ಅಂಗಡಿ, ಸರಕಾರಿ ಬಾಲಕಿಯರ ಪಿ.ಯೂ. ಕಾಲೇಜಿನ ಪ್ರಾಚಾರ್ಯರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಉಪ ಪ್ರಾಚಾರ್ಯರಾದ ಶ್ರೀ ಮುಗಳಖೋಡ, ಅತಿಥಿಗಳಾಗಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ, ಶ್ರೀ ಜೆ.ಬಿ. ಇದ್ದಲಗಿ, ಶ್ರೀ ಎಸ್.ಎಸ್. ನಾರಾ, ಶ್ರೀ ಎನ್.ಎಂ. ಆಗಸಿ ಮುಂತಾದವರು ಉಪಸ್ಥಿತರಿದ್ದರು.

ಪ್ರಾಸ್ತಾವಿಕವಾಗಿ ಶ್ರೀ ಪಿ.ಜಿ. ಬಂದಿಕೇರಿ ಮಾತನಾಡಿದರು ಕಾರ್ಯಕ್ರಮವನ್ನು ಶ್ರೀ ನಾರಾಯಣ ಬ. ಯಳ್ಳಿಗುತ್ತಿ ನಡೆಸಿಕೊಟ್ಟರು. ಜಿಲ್ಲಾ ಸಂಘಟಕರು ಶ್ರೀ ಶರೀಫ ಹತ್ತಿಮತ್ತೂರ ಸ್ವಾಗತಕೋರಿದರು. ಜಿಲ್ಲೆಯ ವಿವಿಧ ಶಾಲೆಗಳಿಂದ, ಸ್ಕೌಟ್ಸ್-ಗೈಡ್ಸ್ ರೋವರ್ಸ್ ರೇಂಜರ್ಸ್ ಹಾಗೂ ಶಿಕ್ಷಕರು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದರು.

ದಿನಾಂಕ 22-02-2013 ರಂದು ಜಮಖಂಡಿ ತಾಲ್ಲೂಕು ಸಂಸ್ಥೆಯಲ್ಲಿ ಸ್ಕೌಟ್ ಸಂಸ್ಥಾಪಕರ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಜೆ.ಆರ್. ಗುಂಡಿ ಸಭೆಯನ್ನು ಉದ್ಘಾಟಿಸಿದರು ಶ್ರೀ ವಿ.ಎಂ. ಕೊಳರ್ ಅಧ್ಯಕ್ಷತೆ ವಹಿಸಿದ್ದರು. ಬಿ.ಇ.ಓ. ಶ್ರೀ ಗಂಗಾಧರ ಮತ್ತು ತಾಲೂಕ ಪದಾಧಿಕಾರಿಗಳು ಉಪಸ್ಥಿತರಿದ್ದರು. "ಬೇಡನ್ ಪೋವಲ್" ಜನ್ಮ ದಿನಾಚರಣೆಯನ್ನು ಕುರಿತು ಉದ್ಘಾಟಕರು ವಿವರಿಸಿದರು.

"ಬೇಡನ್ ಪೋವೆಲ್‌ರ ಜನ್ಮದಿನಾಚರಣೆ ಅಂಗವಾಗಿ ತಾಲ್ಲೂಕು ಮಕ್ಕಳ ಮೇಳವನ್ನು ಜರುಗಿಸಲಾಯಿತು. ಸುಮಾರು 350 ಸ್ಕೌಟ್-ಗೈಡ್‌ಗಳು ರ್‍ಯಾಲಿಯಲ್ಲಿ ಪಾಲ್ಗೊಂಡಿದ್ದರು. ರ್‍ಯಾಲಿಯ ಉದ್ಘಾಟನೆಯನ್ನು ಶ್ರೀ ಜಿ.ಎಂ. ಪಟೇಲ

ಉಪ ಪ್ರಾಚಾರ್ಯರು ಎಸ್.ಆರ್.ಎ. ಪಿ.ಯು. ಕಾಲೇಜು, ಬನಹಟ್ಟಿ, ತಾಲ್ಲೂಕು ಜಮಖಂಡಿ ಇವರು ನೆರವೇರಿಸಿದರು. ನಂತರ ಸ್ಕೌಟ್-ಗೈಡ್‌ಗಳಿಗೆ ಸಾಹಸಮಯ ಚಟುವಟಿಕೆಗಳನ್ನು ಏರ್ಪಡಿಸಲಾಗಿತ್ತು. ಇದೇ ದಿನ ತಾಲ್ಲೂಕಿನ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ಸಹ ಜರುಗಿಸಲಾಯಿತು. ಎಸ್.ಆರ್.ಎ ಪದವಿಪೂರ್ವ ಕಾಲೇಜು, ಬನಹಟ್ಟಿ ಇವರ ನೇತೃತ್ವದಲ್ಲಿ ತಾಲ್ಲೂಕಿನ ಸುಮಾರು 109 ಮಂದಿ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶದಲ್ಲಿ ಭಾಗವಹಿಸಿದ್ದರು.

ಕಾರ್ಯಕ್ರಮವನ್ನು ಶ್ರೀ ಎಂ.ಬಿ. ಶೆಟ್ಟಿ ದೈಹಿಕ ಶಿಕ್ಷಕರು ನಡೆಸಿಕೊಟ್ಟರು. ಶ್ರೀ ಕೆ.ಜಿ. ತೆಲಬಕ್ಕನವರ ಪಿ.ಇ.ಓ., ತಾಲ್ಲೂಕ ಕಾರ್ಯದರ್ಶಿಗಳು ಜಮಖಂಡಿ ಇವರು ಸ್ವಾಗತಿಸಿದರು. ಕೊನೆಯಲ್ಲಿ ಶ್ರೀ ಹೆಚ್.ವೈ. ಆಲ್‌ಮೇಲ್ ಸ್ಕೌಟ್ ಶಿಕ್ಷಕರು ವಂದನಾರ್ಪಣೆ ಮಾಡಿದರು.

## ಶಿವಮೊಗ್ಗ

ದಿನಾಂಕ 22-02-2013 ರಂದು ಬೆಳಿಗ್ಗೆ ಭದ್ರಾವತಿಯ ಗಾಂಧಿ ಪಾರ್ಕ್ ನ್ಯೂಟೌನ್‌ನಲ್ಲಿ ನೋಂದಣಿ, ಧ್ವಜಾರೋಹಣ ಮತ್ತು ಪ್ರಾರ್ಥನೆಯೊಂದಿಗೆ ಸಂಸ್ಥಾಪಕರ ದಿನಾಚರಣೆ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ಕಾರ್ಯಕ್ರಮದ ಉದ್ಘಾಟನೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಟಿ.ಪಿ.ಓ. ಶ್ರೀ ಮಹಮ್ಮದ್ ನೂರುಲ್ಲಾ ರವರು ನೆರವೇರಿಸಿದರು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಎನ್. ನಾರಾಯಣಪ್ಪ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಹೆಚ್. ಶಿವಶಂಕರ್ ಡಿ.ಟಿ.ಸಿ., ಶ್ರೀಮತಿ ಎ. ಅರುಣಮಾಲ ಡಿ.ಟಿ.ಸಿ., ಶ್ರೀ ಬಿ.ಎಂ. ಜಯಾಚಾರ್ ರಿಟೈರ್ಡ್ ಡಿ.ಓ.ಸಿ., ಆಗಮಿಸಿದ್ದರು. ಸಹಕಾರ್ಯದರ್ಶಿಯವರಾದ ಶ್ರೀ ಡಿ.ಹೆಚ್. ಶಿವಶಂಕರ್ ರವರು ಎಲ್ಲರನ್ನೂ ಸ್ವಾಗತಿಸಿದರು. ಕೊನೆಯದಾಗಿ ಶ್ರೀ ಜಿ.ಟಿ. ಗುರುಲಿಂಗಪ್ಪ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಇವರು ವಂದನಾರ್ಪಣೆ ಮಾಡಿದರು. ಈ ಕಾರ್ಯಕ್ರಮವನ್ನು ಶ್ರೀಮತಿ ಪಿ. ವಿಜಯಲಕ್ಷ್ಮಿ ಗೈಡ್ ಕ್ಯಾಪ್ಟನ್ ನಿರೂಪಿಸಿದರು. ಒಟ್ಟು 137 ಸ್ಕೌಟ್ ಮತ್ತು ಗೈಡ್, 13 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದ ನಾಯಕತ್ವವನ್ನು ಶ್ರೀ ಹೆಚ್. ಶಿವಶಂಕರ್ ಮತ್ತು ಶ್ರೀಮತಿ ಎ. ಅರುಣಾಮಾಲಾ ರವರು ವಹಿಸಿದ್ದರು.

ಬಿ.ಪಿ ಯವರ ಬಗ್ಗೆ ಭಾಷಣ, ದೇಶಭಕ್ತಿ ಗೀತೆ ಹಾಗೂ ಬೆಂಕಿ ಇಲ್ಲದೆ ಅಡುಗೆ ಮಾಡುವುದು ಮುಂತಾದ ಸ್ಪರ್ಧೆಗಳನ್ನು ಹಮ್ಮಿಕೊಳ್ಳಲಾಗಿದ್ದಿತು.

ಸಂಜೆ ಸ್ಕೌಟ್-ಗೈಡ್‌ಗಳಿಗೆ ರಸ್ತೆ ಸುರಕ್ಷತೆ ಬಗ್ಗೆ ಸಂಚಾರಿ ಆರಕ್ಷಕ ಠಾಣೆಯ ಉಪನಿರೀಕ್ಷಕರಾದ ಶ್ರೀ ಕೆ. ರಂಗಸ್ವಾಮಿಯವರು ಸವಿಸ್ತಾರವಾಗಿ ಮಾಹಿತಿ ನೀಡಿದರು. ನಂತರ ಸಮಾರೋಪ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶ್ರೀ ಹೆಚ್. ಶಿವಶಂಕರ್ ಎ.ಎಲ್.ಟಿ., ರವರು ಎಲ್ಲರನ್ನೂ ಸ್ವಾಗತಿಸಿದರು. ಅಧ್ಯಕ್ಷತೆಯನ್ನು ಶ್ರೀ ಎನ್. ನಾರಾಯಣಪ್ಪ ನವರು ವಹಿಸಿದ್ದರು. ಬಹುಮಾನ ವಿತರಣೆಯನ್ನು ಶ್ರೀ ಕೆ. ರಂಗಸ್ವಾಮಿಯವರು ನೆರವೇರಿಸಿದರಲ್ಲದೆ, ಸ್ಕೌಟ್ಸ್-ಗೈಡ್ಸ್‌ಗಳಿಗೆ ಉತ್ತಮ ವ್ಯಕ್ತಿತ್ವ, ದೇಶಪ್ರೇಮ ಶಿಸ್ತನ್ನು ಬೆಳೆಸಿಕೊಂಡು ಮುಂದೆ ಉತ್ತಮ ಪ್ರಜೆಗಳಾಗಿ ಬಾಳಲು ಈ ಸ್ಕೌಟ್ಸ್-ಗೈಡ್ಸ್ ಸಂಘಟನೆಗೆ ಸೇರಿಕೊಳ್ಳಿರಿ ಎಂಬುದಾಗಿ ಸಂದೇಶ ನೀಡಿದರು.

ಅಧ್ಯಕ್ಷರ ನುಡಿಯಲ್ಲಿ ಶ್ರೀ ಎನ್. ನಾರಾಯಣಪ್ಪನವರು ಎಲ್ಲರಿಗೂ ಶುಭ ಹಾರೈಸಿದರು. ಕೊನೆಯದಾಗಿ ಶ್ರೀ ಜಿ.ಟಿ. ಗುರುಲಿಂಗಪ್ಪ ನವರು ಎಲ್ಲರಿಗೂ ವಂದನೆ ಸಲ್ಲಿಸಿದರು.

## ದಾವಣಗೆರೆ

ದಿನಾಂಕ 22-02-2013 ರಂದು "ವಿಶ್ವ ಚಿಂತನಾ" ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ಆಟೋಟ ಸ್ಪರ್ದೆಗಳನ್ನು ಏರ್ಪಡಿಸಲಾಗಿತ್ತು.

ಈ ಸಮಾರಂಭದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಗುರುಗಳಾದ ಶ್ರೀಮತಿ ಯಂಕಟಮ್ಮ ಶ್ರೀ ಎನ್. ನಿಜಲಿಂಗಪ್ಪ, ಗೈಡ್ ಶಿಕ್ಷಕಿಯರಾದ ಶ್ರೀಮತಿ ವಜ್ರಗಂಗಮ್ಮ ಜೆ.ಎಂ. ಮತ್ತು ಶ್ರೀಮತಿ ಕಲ್ಲಮ್ಮ ಬಿ. ಮತ್ತು

ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಟಿ.ಕೆ. ಚಂದ್ರಪ್ಪ ಮತ್ತು ಇತರೆ ಸದಸ್ಯರು ಮತ್ತು ಶಾಲೆಯ ಸಹಶಿಕ್ಷಕರುಗಳಾದ ಶ್ರೀ ಎಸ್. ನಾಗರಾಜ ಶ್ರೀಮತಿ ಎಸ್.ಎನ್. ರೇವಮ್ಮ ಮತ್ತು ಶ್ರೀ ನೇಮಿಚಂದ್ರ ಮತ್ತು ಗ್ರಾಮದ ಪೋಷಕರು ಮತ್ತು ನಾಗರಿಕರು ಭಾಗವಹಿಸಿದ್ದರು.

**************

District Association celebrated the 156th Founders Day on 22nd Feb 2013 , 425 Cubs, Bulbuls, Scouts, Guides, Rovers and Rangers along with Scouters and Guiders were present.

The celebrations started in the morning with Route March in the main streets of the citywhich was flagged off by Sri Nagendrappa, Asst. Superintendent of Police. After the route march the Scouts & Guides had a number of competitions in various activities suh as Rangoli, Drawing, Handicrafts, Mehandi.

In the afternoon in the valedictory function Smt. Prema, Principal & D.D.P.I. DIET, Davanagere praised the Scouts & Guides for their discipline and good manners. Sri Thrilok Sing, Dist Physical education Superintendent in his speach congratulated the boys and girls who have joined this movement. Smt. Puttamma maharudraiah District Commissioner Guides welcomed the guests. Report was read by Sri N.D. Tammannanavar, District Trainig Commissioner Scouts The President of the district association Sri Mohammed Wasil Presided.

## ಬಿಜಾಪುರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬಿಜಾಪುರ ಹಾಗೂ ಶ್ರೀ ರಾಮಕೃಷ್ಣ ವಿದ್ಯಾ ವಸತಿ ಶಾಲೆ ಬಿಜಾಪುರ ಇವರ ಸಂಯುಕ್ತ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ಜಿಲ್ಲಾ ಮಟ್ಟದ ಸಂಸ್ಥಾಪಕರ ಹಾಗೂ ಚಿಂತನಾ ದಿನಾಚರಣೆಯ ಮುಖ್ಯ ಅತಿಥಿಗಳಾಗಿ ಶ್ರೀಮತಿ ನಿರ್ಮಲ ಕಲಶೆಟ್ಟಿ ಭಾಗವಹಿಸಿದ್ದರು. ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ವಾಸುದೇವ ಹೆರಕಲ್ ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಕಛೇರಿಯ ವಿಷಯ ಪರಿವೀಕ್ಷಕರಾದ ಶ್ರೀ ನಾಗೇಶ ಸಿನ್ನೂರ ಜಿಲ್ಲಾ ಸಂಸ್ಥೆ ಖಜಾಂಚಿಗಳಾದ ಶ್ರೀ ಸಹಜಾನಂದ ದಂಧರಗಿ ಭಾಗವಹಿಸಿದ್ದರು. ರಾಮಕೃಷ್ಣ ಶಾಲೆಯ ಆಡಳಿತಾಧಿಕಾರಿಗಳಾದ ಶ್ರೀ ದಿಲೀಪ್ ಪೂಜಾರಿ ಅಧ್ಯಕ್ಷತೆ ವಹಿಸಿ ಮಾತನಾಡಿದರು.

## ತುಮಕೂರು

ದಿನಾಂಕ 22-02-2013 ರಂದು ಸ್ಕೌಟ್ಸ್ ಸ್ಥಾಪಕರಾದ ಬಿ.ಪಿ. ಯವರ 157ನೇ ಜನ್ಮ ದಿನಾಚರಣೆ ಆಚರಿಸಲಾಯಿತು. ಅಧ್ಯಕ್ಷತೆಯನ್ನು ಶ್ರೀ ಸುಭಾಷ್ ರವರು ವಹಿಸಿ ಸ್ಕೌಟ್ಸ್-ಗೈಡ್ಸ್‌ನಿಂದ ದೊರೆಯುವ ಪ್ರಶಸ್ತಿಗಳು ವ್ಯಕ್ತಿಗಳ ಜೀವನದಲ್ಲಿ ಮಹತ್ತರ ಬದಲಾವಣೆ ತರುತ್ತವೆ. ಇವನ್ನು ಸದುಪಯೋಗ ಪಡಿಸಿಕೊಳ್ಳಿರಿ ಎಂದು ಸಂದೇಶ ನೀಡಿದರು.

ಮುಖ್ಯ ಅತಿಥಿಗಳಾಗಿ ಪ್ರಾಚಾರ್ಯರಾದ ಶ್ರೀ ಪಿ. ಮಹೇಂದ್ರಪ್ಪನವರು ಮಾತನಾಡಿ, ಸ್ಕೌಟ್‌ಗಳು ಶಿಸ್ತು ಸಂಯಮ ದೇಶಪ್ರೇಮಕ್ಕೆ ಹೆಸರಾದವರು ಎಂದು ನುಡಿದರು. ಸಾಹಿತಿ ತಾ. ಸ. ಪುಷ್ಪರವರು ಬೆಳೆಯುವ ಸಿರಿ ಮೊಳಕೆಯಲ್ಲಿ ಎನ್ನುವಂತೆ ನಿಮಗೆ ಈ ಶಿಕ್ಷಣ ಮಹತ್ತರ ಬದಲಾವಣೆ ತರುತ್ತದೆ ಎಂದು ನುಡಿದರು. ಎ.ಡಿ.ಸಿ(ಎಸ್) ಶ್ರೀ ಪಾತಲಿಂಗಯ್ಯನವರು ಬಿ.ಪಿ.ರವರ ಲಘು ಪರಿಚಯ ಮುಂದಿಟ್ಟರು.

ಕಾರ್ಯದರ್ಶಿ ಶ್ರೀ ಹನುಮಂತರಾಯ ಸ್ವಾಗತಿಸಿದರು. ಶ್ರೀ ರಮೇಶ್ ಸರ್ವರನ್ನು ವಂದಿಸಿದರು.

## ಕಾರವಾರ

ಕಾರವಾರ ಜಿಲ್ಲಾ ಸಂಸ್ಥೆಯವರು ಹಳದೀಪುರದ ಜೋಗಿನಕಟ್ಟೆ ಸಭಾಭವನದಲ್ಲಿ ಕಬ್ಸ್ ಬುಲ್ ಬುಲ್ಸ್‌ಗಳಿಗೆ 2 ದಿನಗಳ ಸಿಕ್ಸರ್ಸ್ ಕ್ಯಾಂಪ್ ಹಮ್ಮಿಕೊಂಡಿದ್ದರು. ಈ ಕ್ಯಾಂಪಿನ ಉದ್ಘಾಟನೆಯನ್ನು ಶ್ರೀಶ್ರೀಶ್ರೀ ವಾಮನಾಶ್ರಮ ಸ್ವಾಮೀಜಿಯವರು ಜ್ಯೋತಿ ಬೆಳಗಿಸಿ ನೆರವೇರಿಸಿದರು. ಜೋಗಿನ ಕಟ್ಟಾ ದೇವಸ್ಥಾನದ ಅಧ್ಯಕ್ಷರಾದ ಶ್ರೀ ಪಿ.ಕೆ. ನಾಯ್ಕ, ಶ್ರೀ ಮಧುಕರ್ ನಾಯ್ಕ ಹಾಗೂ ಸಾರ್ವಜನಿಕರೂ ಉಟೋಪಚಾರದ ವ್ಯವಸ್ಥೆ ಮಾಡಿದ್ದರು.

ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಜಿ.ಜಿ. ಸಭಾಹಿತ್, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಅರುಣ ನಾಯ್ಕ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಲಲಿತಾ ಹೆಗ್ಡೆ, ಸ್ಥಾನಿಕ ಆಯುಕ್ತರಾದ ಶ್ರೀ ಎಸ್.ಎಸ್. ಭಟ್ ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್, ಶ್ರೀ ಎನ್.ಎಲ್. ಭಟ್ ಕನಕ್, ಬೇಬಿ ವೈದ್ಯ, ಇತರರು ಉಪಸ್ಥಿತರಿದ್ದರು.

ಶಿಬಿರದ ನಾಯಕರಾಗಿ ಶ್ರೀ ಎಸ್.ಎಸ್. ಹುಸೇನಿ ಎಲ್.ಟಿ. (ಕಬ್ಸ್) ಕಾರ್ಯನಿರ್ವಹಿಸಿದರು. ಜಿಲ್ಲೆಯ ಬೇರೆ ಬೇರೆ ತಾಲ್ಲೂಕುಗಳಿಂದ ಸುಮಾರು 50 ಕಬ್ಸ್-ಬುಲ್ ಬುಲ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ : 26-02-2013 ರಂದು ಹೊನ್ನಾವರದ ಶರಾವತಿ ಕಲಾಮಂದಿರದಲ್ಲಿ ಲಾರ್ಡ್ ಬೇಡನ್ ಪೋವೆಲ್ಲರ ಜನ್ಮದಿನ, ವಿಶ್ವ ಗೈಡ್ಸ್ ಶತಮಾನೋತ್ಸವ ಮುಕ್ತಾಯ ಮತ್ತು ಕಬ್ಸ್, ಬುಲ್ ಬುಲ್ಸ್, ರೋವರ್ಸ್ ರೇಂಜರ್ಸ್ ಗಳ ಮೇಳ ಏರ್ಪಡಿಸಲಾಗಿತ್ತು. ಮುಂಜಾನೆ ಹೊನ್ನಾವರದ ಪಿ.ಎಸ್.ಐ. ಎಂಟೋನಿ ಜ್ಯೋಯ್ ಹಸಿರು ನಿಶಾನೆ ತೋರಿಸಿ ಪಥಚಲನೆಗೆ ಚಾಲನೆ ಕೊಟ್ಟರು. ಸಮಾವೇಶದ ಉದ್ಘಾಟನೆಯನ್ನು ಹೊನ್ನಾವರದ ದಂಡಾಧಿಕಾರಿಗಳು ಮತ್ತು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರುಗಳಾದ ಶ್ರೀಮತಿ ಗಾಯತ್ರಿ ನಾಯ್ಕ ಗಿಡಕ್ಕೆ ನೀರು ಎರೆಯುವ ಮೂಲಕ ನೆರವೇರಿಸಿದರು.

ಪೊಲೀಸ್ ವೃತ್ತ ನಿರೀಕ್ಷಕರಾದ ಶ್ರೀ ಮಂಜುನಾಥ ಗೌಡ ಅತಿಥಿಗಳಾಗಿ ಉಪಸ್ಥಿತರಿದ್ದು ಶುಭ ಕೋರಿದರು. ಸಮಾರಂಭದ ಅಧ್ಯಕ್ಷತೆಯನ್ನು ಎ.ಡಿ.ಸಿ.(ಎಸ್) ಶ್ರೀ ಆರ್.ಎಸ್. ಹೆಗ್ಡೆಯವರು ವಹಿಸಿದ್ದರು.

ಮಧ್ಯಾಹ್ನ ಅಗ್ನಿಶಾಮಕ ದಳದವರಿಂದ ಪೊಲೀಸ್ ಪೆರೇಡ್ ಮೈದಾನದಲ್ಲಿ ಅಣುಕು ಪ್ರದರ್ಶನ ನಡೆಯಿತು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಭಾಹಿತ್ ವಹಿಸಿದ್ದರು. ಅತಿಥಿಗಳಾಗಿ ಡಿ.ಎಫ್:ಒ. ಡಾ॥ ಎಸ್. ರಮೇಶ್, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹೊನ್ನಾವರದ ಉದ್ದಿಮೆದಾರ ಹಾಗೂ ಸಾಮಾಜಿಕ ಕಾರ್ಯಕರ್ತರಾದ ಶ್ರೀ ಜೆ.ಟಿ. ಪೈಮ ಇವರುಗಳು ಉಪಸ್ಥಿತರಿದ್ದು ಸ್ಕೌಟ್ಸ್ ಗೈಡ್ಸ್‌ಗಳಿಗೆ ಹಿತವಚನಗಳನ್ನು ತಿಳಿಹೇಳಿ ಶುಭಕೋರಿದರು.

ಸಮಾರೋಪ ಸಮಾರಂಭದಲ್ಲಿ ಹಿರಿಯ ಸ್ಕೌಟರ್ ಹಾಗೂ ಮಾಜಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ದಿನಕರ ಜೋಶಿ, ಮಾಜಿ ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ವಿ. ನಾಯ್ಕ, ಹಿರಿಯ ಸ್ಕೌಟ್ ಮಾಸ್ಟರ್ ಶ್ರೀ ಎನ್. ಎಲ್. ಭಟ್ ಕನಕ ಹಾಗೂ ರಾಷ್ಟ್ರಪ್ರಶಸ್ತಿ ವಿಜೇತ ಅಗ್ನಿ ಶಾಮಕ ಠಾಣಾಧಿಕಾರಿ ಶ್ರೀ ಎಸ್. ರುಕ್ಮಯ್ಯ ಶೆಟ್ಟಿಗಾರ್ ಇವರನ್ನು ಸನ್ಮಾನಿಸಲಾಯಿತು.

ಸಮಾರಂಭದಲ್ಲಿ ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀಮತಿ ಭಾರತಿ ಡಯಾಸ್, ತಾಲ್ಲೂಕು ಕಾರ್ಯದರ್ಶಿ ಶ್ರೀ ಎಂ.ಡಿ. ಹರಿಕಾಂತ್, ಜಿಲ್ಲಾ ಕೋಶಾಧ್ಯಕ್ಷರಾದ ಶ್ರೀ ಆರ್.ಟಿ. ಹೆಬ್ಬಾರ್ ಇವರು ಉಪಸ್ಥಿತರಿದ್ದರು. ಬಂದ ಅತಿಥಿಗಳನ್ನು ಶ್ರೀ ಎಂ.ಡಿ. ಹರಿಕಾವ್ ಸ್ವಾಗತಿಸಿದರೇ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಬಿ.ಡಿ. ಫನಾಂಡೀಸ್ ವಂದನಾರ್ಪಣೆ ಮಾಡಿದರು. ಈ ಸಮಾರಂಭದಲ್ಲಿ 600 ಸ್ಕೌಟ್ಸ್, ಗೈಡ್ಸ್, ಕಬ್ಸ್ ಬುಲ್ ಬುಲ್ಸ್, ರೇಂಜರ್ಸ್, ರೋವರ್ಸ್‌ಗಳು ಭಾಗವಹಿಸಿದರು. ಕಾರ್ಯಕ್ರಮದ ನಿರೂಪಣೆ ಶ್ರೀ ಆರ್.ಟಿ. ಹೆಬ್ಬಾರ್, ಶ್ರೀ ಬಿ.ಎಂ. ಭಟ್ ನಿರ್ವಹಿಸಿದರು.

ದಿನಾಂಕ 24-02-2013 ರಂದು ಮಾರ್ಥೋಮ ಶಾಲೆಯ ಕಬ್ಸ್ ಮತ್ತು ಬುಲ್ ಬುಲ್ಸ್‌ಗಳು ಒಂದು ದಿನದ ನಿಸರ್ಗ ಅಧ್ಯಯನ ಶಿಬಿರ ಅಪ್ಸರಾಕೊಂಡದಲ್ಲಿ ಹಮ್ಮಿಕೊಂಡಿದ್ದರು. ಇದರ ನೇತೃತ್ವವನ್ನು ಸ್ಕೌಟ್ಸ್ ಮಾಸ್ಟರ್ ಶ್ರೀ ನರೇಶ್ ನಾಯ್ಕ ವಹಿಸಿದ್ದರು.

ಬೆಳಿಗ್ಗೆ ಅಪ್ಸರಕೊಂಡದ ನಿಸರ್ಗದ ಮಡಿಲಲ್ಲಿ ಧ್ವಜಾರೋಹಣ ನಡೆಯಿತು. ನಂತರ ಸ್ಕೌಟ್ಸ್-ಗೈಡ್ಸ್‌ಗಳಿಗೆ ನಿಸರ್ಗದ ಚಿತ್ರಣ ತೆಗೆಯುವುದು, ಬಲೂನ್ ರೇಸ್, ಲೆಮನ್ ಸ್ಪೂನ್ ರೇಸ್, ಸ್ಪರ್ಧೆಗಳು ನಡೆದವು. ಮತ್ತು ಗಂಟುಗಳು ತಾರಾಕಥೆ, ಮೋಗ್ಲಿ ಕಥೆಗಳನ್ನು ಹೇಳಿ ತಿಳಿಸಲಾಯಿತು. ಕಬ್ ಮಾಸ್ಟರ್ ಶ್ರೀ ಮುರಳಿ ಜೋಸ್ ರವರು ಅಭಿನಯ ಗೀತೆಗಳನ್ನು ಹೇಳಿಕೊಟ್ಟರು. ಪ್ರಾರಂಭದಲ್ಲಿ ಫಾದರ್ ಜೋಜಿ ಥಾಮಸ್ ಪ್ರಾಂಶುಪಾಲರು ಪ್ರಾರ್ಥನೆಯೊಂದಿಗೆ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಳಿಸಿಕೊಟ್ಟರೆ ಸಂಜೆಗೆ ರಾಷ್ಟ್ರಗೀತೆ-ಪ್ರಾರ್ಥನೆಯೊಂದಿಗೆ ಶಿಬಿರದ ಮುಕ್ತಾಯ ಮಾಡಲಾಯಿತು. ಈ ಶಿಬಿರದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ಉಪಸ್ಥಿತರಿದ್ದರು ಸ್ಕೌಟ್ಸ್-ಗೈಡ್ಸ್‌ಗಳನ್ನು ಹುರಿದುಂಬಿಸಿದರು. ಶಾಲೆಯ ಹಲವು ಶಿಕ್ಷಕ-ಶಿಕ್ಷಕಿಯರು ಹಾಗೂ ಸಿಬ್ಬಂದಿ ವರ್ಗದವರು ಪಾಲುಗೊಂಡಿದ್ದರು.

ದಿನಾಂಕ 12-02-2013 ರಿಂದ 19-02-2013 ವರೆಗೆ ಭಟ್ಕಳ್ ತಾಲ್ಲೂಕಿನ ಮೆಟ್ರಿಕ್ ಪೂರ್ವ ವಸತಿ ಗೃಹದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಕಾರವಾರ ಜಿಲ್ಲಾ ಸಂಸ್ಥೆ ಹಾಗೂ ಡಯಟ್ ಕುಮಟರವರ ಸಂಯುಕ್ತಾಶ್ರಯದಲ್ಲಿ ಜಿಲ್ಲೆಯ ಪ್ರಾಥಮಿಕ ಪ್ರೌಢಶಾಲೆ ಶಿಕ್ಷಕರಿಗೆ ಸ್ಕೌಟ್ ಮತ್ತು ಗೈಡ್ಸ್ ಮೂಲ ತರಬೇತಿ ಶಿಬಿರ ನಡೆಯಿತು. ಸ್ಕೌಟ್ ಮೂಲ ತರಬೇತಿ ಶಿಬಿರದ ನಾಯಕರಾಗಿ ಮೈಸೂರಿನ ಶ್ರೀ ಕೆ.ಜಿ. ಗೋಪಾಲಕೃಷ್ಣ ಎಲ್.ಟಿ.(ಎಸ್) ಗೈಡ್ ಮೂಲ ತರಬೇತಿ ಶಿಬಿರದ ನಾಯಕಿಯಾಗಿ ಸೋ॥ ಸಿಂಥಿಯಾ ಆಗಮಿಸಿದ್ದರು.

ದಿನಾಂಕ 18-02-2013 ಸಂಜೆ ಮುಕ್ತಾಯ ಸಮಾರಂಭ ನಡೆಯಿತು. ಈ ಸಮಾರಂಭಕ್ಕೆ ಅತಿಥಿಗಳಾಗಿ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಗೌಡ, ಎ.ಡಿ.ಸಿ.,(ಎಸ್) ಶ್ರೀ ವಿ.ಜಿ. ನಾಯ್ಕ, ಬಿ.ಇ.ಡಿ. ಕಾಲೇಜು ಪ್ರಾಂಶುಪಾಲರಾದ ಶ್ರೀ ನರಸಿಂಹಮೂರ್ತಿ, ಸಮಾಜ ಕಲ್ಯಾಣಾಧಿಕಾರಿಗಳಾದ ಶ್ರೀಮತಿ ಭಾರತೀ ನಾಯ್ಕ, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ಉಪಸ್ಥಿತರಿದ್ದರು. ಶ್ರೀಮತಿ ಭಾರತಿ ಡಯಾಸ್ ಎ.ಎಸ್.ಓ.ಸಿ (ಗೈ) ರವರು ಸ್ವಾಗತಿಸಿದರು. ಶ್ರೀ ಜಿ.ಸಿ. ದೇವರಾಜ್ ವಂದನಾರ್ಪಣೆ ಗೈದರು.

## ಉಡುಪಿ

ದಿನಾಂಕ 22-02-2013 ರಂದು ಉಡುಪಿ ಜಿಲ್ಲಾ ಸಂಸ್ಥೆಯ ವತಿಯಿಂದ ಸ್ಥಾಪಕರ ದಿನಾಚರಣೆ ಹಾಗೂ ಚಿಂತನಾ ದಿನಾಚರಣೆ ಕಾರ್ಯಕ್ರಮ ಹಾಗೂ ಉಡುಪಿ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯನ್ನು ಜಿಲ್ಲಾ ತರಬೇತಿ ಕೇಂದ್ರ, ಕಾರಂತ ಕಲಾ ಗ್ರಾಮ ಪ್ರಗತಿನಗರ, ಇಲ್ಲಿ ಸಂಘಟಿಸಲಾಯಿತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಪಿ. ರಬೀಂದ್ರ ನಾಯಕ್ ಇವರು ವಹಿಸಿದ್ದರು. ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯನ್ನು ಡಾ॥ ರಂಜನ್ ಶೆಟ್ಟಿ, ಹೃದಯ ತಜ್ಞರು, ಕೆ.ಎಂ.ಸಿ. ಮಣಿಪಾಲ್ ಇವರು ದೀಪ ಬೆಳಗಿಸಿ ಉದ್ಘಾಟಿಸಿದರು. ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿದೆ. ಸ್ಕೌಟಿಂಗ್-ಗೈಡಿಂಗ್‌ನ ಶಿಬಿರಗಳಲ್ಲಿ ಭಾಗವಹಿಸುವುದರಿಂದ ಸಮಾಜದಲ್ಲಿ ಎಲ್ಲರೊಂದಿಗೆ ಬೆರೆತು ಬಾಳಲು ಸಾಧ್ಯವಾಗುವುದು ಎಂದು ತಿಳಿಸಿದರು.

ಶ್ರೀ ಕೆ.ಬಿ. ರಾವ್ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ, ಜಿಲ್ಲಾ ಆಯುಕ್ತರು ಗೈಡ್ಸ್, ಶ್ರೀಮತಿ ರೂಪಾ ಕಿಣಿ, ರ್‍ಯಾಲಿ ನಾಯಕಿ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಶ್ರಿ ಬಿ. ಆನಂದ ಅಡಿಗ, ಜಿಲ್ಲಾ ಸ್ಥಾನಿಕ ಆಯುಕ್ತರು(ಸ್ಕೌಟ್ಸ್) ಸ್ವಾಗತಿಸಿದರು. ರಾಜ್ಯ ಸಹಾಯಕ ಸಂಘಟನಾ ಆಯುಕ್ತ(ಸ್ಕೌಟ್ಸ್) ಶ್ರೀ ಎಂ. ಪ್ರಭಾಕರ್ ಭಟ್ ಕಾರ್ಯಕ್ರಮ ನಿರ್ವಹಿಸಿದರು. ಒಟ್ಟು 500 ಸ್ಕೌಟ್ಸ್-ಗೈಡ್ಸ್, ಕಬ್, ಬುಲ್ ಬುಲ್ಸ್‌ಗಳು ಮತ್ತು ಗೈಡರ್‌ಗಳು ಭಾಗವಹಿಸಿದ್ದರು.

ದಿನಾಂಕ 23-02-2013 ರಂದು ಕಲ್ಯಾಣಪುರ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ, ಕಬ್, ಬುಲ್‌ಬುಲ್ ಉತ್ಸವ, ಮಣಿಪಾಲ ಮಾಧವ ಕೃಪಾ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಜರುಗಿತು ಕಲ್ಯಾಣಪುರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಶ್ರೀ ಸಲ್ದಾರ್ ಕ್ರಾಸ್ತಾ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಪಿಯರ್‌ಸನ್ ಸಮೂಹ ಸಂಸ್ಥೆಗಳ

ದಕ್ಷಿಣ ವಲಯದ ಶೈಕ್ಷಣಿಕ ಸಂಯೋಜಕಿ ಡಾ॥ ಕುಸುಮ್ ಉದ್ಘಾಟಿಸಿದರು, ರಾಜ್ಯ ಆಯುಕ್ತರು(ಗೈಡ್ಸ್) ಶ್ರೀಮತಿ ಶಾಂತಾ ವಿ. ಆಚಾರ್ಯ, ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಪಿ. ರಬೀಂದ್ರ ನಾಯಕ್, ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಕೆ.ಬಿ. ರಾವ್, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು(ಗೈಡ್ಸ್) ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ, ಹೆಡ್ ಕ್ವಾಟರ್ಸ್ ಕಮೀಷನರ್(ರೋ) ಪ್ರೊ. ಪಿ. ದಯಾನಂದ್ ಶೆಟ್ಟಿ, ಕೇಂದ್ರ ಸ್ಥಾನೀಯ ಆಯುಕ್ತರು(ಕಬ್) ಶ್ರೀ ಯುಎಸ್. ರಾಜಗೋಪಾಲ್ ಆಚಾರ್ಯ, ಕಲ್ಯಾಣಪುರ ಸ್ಥಳೀಯ ಸಂಸ್ಥೆಯ ಕೋಶಾಧಿಕಾರಿ ಶ್ರೀ ಸಂಜೀವ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಮುಖ್ಯ ಶಿಕ್ಷಕಿ ಶ್ರೀಮತಿ ಲೀನಾ ರಾಜನ್ ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ವಿನಯ್ ಶೇಟ್ ಕಾರ್ಯಕ್ರಮ ನಿರ್ವಹಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ಪ್ರಶಾಂತ್ ವಂದಿಸಿದರು.

ಸ್ಕೌಟ್ಸ್-ಗೈಡ್ಸ್ ರ‍್ಯಾಲಿ, ಕಬ್ ಬುಲ್ ಬುಲ್ ಉತ್ಸವ ಸಮಾರೋಪ ಸಮಾರಂಭವು ಮಾಧವ ಕೃಪಾ ಆಂಗ್ಲ ಮಾಧ್ಯಮ ಶಾಲೆಯ ಪ್ರಾಥಮಿಕ ವಿಭಾಗದ ಸಂಯೋಜಕಿ ಶ್ರೀಮತಿ ಶಶಿಕಲಾ ರಾಜವರ್ಮಾ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಸಹಾಯಕ ರಾಜ್ಯ ಸಂಘಟನಾ ಆಯುಕ್ತ(ಸ್ಕೌಟ್ಸ್) ಶ್ರೀ ಎಂ. ಪ್ರಭಾಕರ್ ಭಟ್, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್ಸ್) ಶ್ರೀ ಕೊಗ್ಗ ಗಾಣಿಗ, ಜಿಲ್ಲಾ ತರಬೇತಿ ಆಯುಕ್ತರು(ಗೈಡ್ಸ್) ಕು. ವನಿತಾ ಎಂ. ರಾವ್, ಸ್ಥಾನೀಯ ಆಯುಕ್ತರು(ಸ್ಕೌಟ್ಸ್) ಶ್ರೀ ಬಿ. ಆನಂದ ಅಡಿಗ ಇವರುಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಚಟುವಟಿಕೆಯಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಗಳಿಗೆ ಬಹುಮಾನವನ್ನು ನೀಡಲಾಯಿತು. ಶಾಲಾ ಶಿಕ್ಷಕಿ ಶ್ರೀಮತಿ ಶೋಭಾ ಹೆಗ್ಡೆ ವಿಜೇತರ ವಿವರ ನೀಡಿದರು. ಸ್ಕೌಟ್ ಮಾಸ್ಟರ್ ಶ್ರೀಮತಿ ಶಕುಂತಲಾ ಕಾರ್ಯಕ್ರಮ ನಿರ್ವಹಿಸಿದರು. ಲೇಡಿಕಬ್ ಮಾಸ್ಟರ್ ಶ್ರೀಮತಿ ಸುಜಾತಾ ಧನ್ಯವಾದ ನೀಡಿದರು. ಗೈಡರ್‌ಗಳಾದ ಕು. ಮಲ್ಲಿಕಾ, ಶ್ರೀಮತಿ ಅಶ್ವಿನಿ, ದೀಕ್ಷಾ ಹೆಗ್ಡೆ, ಸಮಾರೋಪ ಯಶಸ್ವಿಯಾಗಲು ಸಹಕರಿಸಿದರು.

## ಚಾಮರಾಜನಗರ

ದಿನಾಂಕ 27-02-2013 ರಂದು ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮತ್ತು ಶ್ರೀ ಚೌಡೇಶ್ವರ ಹಿ. ಪ್ರಾ. ಶಾಲೆ ಕೊಳ್ಳೇಗಾಲ ಇವರ ಸಂಯುಕ್ತ ಆಶ್ರಯದಲ್ಲಿ ಲಾರ್ಡ್ ಬೇಡನ್ ಪೋವೆಲ್ ರವರ ಜನ್ಮದಿನಾಚರಣೆಯನ್ನು ಶ್ರೀ ಚೌಡೇಶ್ವರಿ ಪ್ರೌಢಶಾಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ಸ್-ಗೈಡ್ಸ್‌ಗಳಿಗೆ ವಿವಿಧ ಸ್ಪರ್ಧೆಗಳನ್ನು ನಡೆಸಿ ಪ್ರಶಸ್ತಿ ಪತ್ರ ಮತ್ತು ಬಹುಮಾನಗಳನ್ನು ಕೊಡಲಾಯಿತು. ಈ ಕಾರ್ಯಕ್ರಮದಲ್ಲಿ ಆಡಳಿತ ಮಂಡಳಿಯ ಅಧ್ಯಕ್ಷರು, ಕಾರ್ಯದರ್ಶಿಗಳು, ಸದಸ್ಯರು ಹಾಜರಿದ್ದರು. ಹಾಗೂ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಷರಾಫ್ ಮಾದಪ್ಪನವರು ಭಾಗವಹಿಸಿದ್ದರು. ಈ ಕಾರ್ಯಕ್ರಮವನ್ನು ಸ್ಕೌಟ್ ಮಾಸ್ಟರ್ ಶ್ರೀ ತ.ನಾ. ಸೋಮಣ್ಣನವರು ಆಯೋಜಿಸಿದ್ದರು.

## Bangalore South

The HAL Rover Crew Celebrated the Founders Day and 22nd February 2013 in a unique way. The Rovers gathered at "Mathru Foundation" a home for Physically Handicapped Children at HAL quarters and celebrated the Founders and Thinking day by cutting cake by the Physically challenged children.The Rover Scout Leader Sri P. Nanda Kumar explained to them the importance of Scouting in youths and inspired them to join the Special branch Scouting for Handicapped children. The Rover Scouts of HAL distributed sweets and gifts to the children.

"Mathru Foundation" is a home for Physically challenged children run by Smt. Malathi Holla, Padmashree Awardee and Arjun Awardee and by Sri Krishna Reddy (Retd) HAL

-2-

4) ವಾರ್ಷಿಕ ಚಟುವಟಿಕೆಯ ವರದಿಯನ್ನು ಜಿಲ್ಲಾ ಸಂಸ್ಥೆ ಮತ್ತು ರಾಜ್ಯ ಸಂಸ್ಥೆಯ ಸ್ಕೌಟ್ ಮತ್ತು ಗೈಡ್ ವಿಭಾಗಗಳಿಗೆ ಕಳುಹಿಸತಕ್ಕದ್ದು.

5) ತರಬೇತಿ ಪಡೆದ ಅಧ್ಯಾಪಕರುಗಳ ಸೇವಾ ಪುಸ್ತಕದಲ್ಲಿ ತರಬೇತಿ ವಿವರಗಳ ಕಾಲಂನಲ್ಲಿ ಆರ್.ಎಸ್.ಎಲ್/ಆರ್.ಎಲ್. ತರಬೇತಿ ಹೊಂದಿದ ಬಗ್ಗೆ ನಮೂದಿಸುವುದು ಹಾಗೂ ಪ್ರಮಾಣ ಪತ್ರದ ನಕಲನ್ನು ಲಗತ್ತಿಸುವುದು.

6) ಮೂಲ ತರಬೇತಿ ಪಡೆದ ಒಂದು ವರ್ಷದ ನಂತರ ರೋವರ್ ಸ್ಕೌಟ್ ಲೀಡರ್ ಮತ್ತು 6 ತಿಂಗಳ ನಂತರ ರೇಂಜರ್ ಲೀಡರ್‌ಗಳು ಮುಂದುವರೆದ ಆರ್.ಎಸ್.ಎಲ್/ಆರ್.ಎಲ್ ತರಬೇತಿಗಳನ್ನು ಪಡೆಯಲು ನಿಯೋಜಿಸುವುದು. ಎಲ್ಲಾ ಪ್ರಗತಿಪರ ಮತ್ತು ಇತರ ತರಬೇತಿಗಳಿಗೆ ಸುತ್ತೋಲೆ ಬಂದಾಗ ನಿಯೋಜಿಸುವುದು ಹಾಗೂ ರಾಜ್ಯ/ಜಿಲ್ಲಾ ಸಂಸ್ಥೆಯಿಂದ ಸಿಬ್ಬಂದಿಗಳಾಗಿ ಆಹ್ವಾನಿಸಿದಲ್ಲಿ ನಿಯೋಜಿಸುವುದು.

7) ರೋವರ್/ರೇಂಜರ್‌ಗಳ ಪ್ರಗತಿ ಪರ ಪದಕಗಳಾದ ಪ್ರವೀಣ, ನಿಪುಣ್(ರಾಜ್ಯಪಾಲರ ಪದಕ), ರಾಷ್ಟ್ರಪತಿ ಪದಕ ಪಡೆಯಲು ಪ್ರೋತ್ಸಾಹಿಸುವುದು.

8) ಸಂಸ್ಥೆಗೆ ಸಂಬಂಧಪಟ್ಟ ಪತ್ರ ವ್ಯವಹಾರವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಮುಖಾಂತರ ನಡೆಸುವುದು.

ಕಾಲೇಜು ಶಿಕ್ಷಣ ನಿರ್ದೇಶಕರು

ಇವರಿಗೆ:

1. ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಪ್ರಾದೇಶಿಕ ಕಛೇರಿ, ಬೆಂಗಳೂರು, ಮೈಸೂರು, ಶಿವಮೊಗ್ಗ, ಮಂಗಳೂರು, ಧಾರವಾಡ, ಗುಲಬರ್ಗಾ.
2. ಎಲ್ಲಾ ಸರ್ಕಾರಿ ಹಾಗೂ ಖಾಸಗಿ ಅನುದಾನಿತ ಕಾಲೇಜುಗಳ ಪ್ರಾಂಶುಪಾಲರುಗಳಿಗೆ.
3. ರಾಜ್ಯ ಕಾರ್ಯದರ್ಶಿ, ದಿ ಭಾರತ್ ಸ್ಕೌಟ್ಸ್ & ಗೈಡ್ಸ್, ಕರ್ನಾಟಕ, "ಶಾಂತಿ ಗೃಹ", ನಂ.39, ಅರಮನೆ ರಸ್ತೆ, ಬೆಂಗಳೂರು-01.

ಪ್ರತಿಯನ್ನು:

1. ಆಯುಕ್ತರ, ನಿರ್ದೇಶಕರ, ಹೆಚ್ಚುವರಿ ನಿರ್ದೇಶಕರ, ಮುಖ್ಯ ಆಡಳಿತಾಧಿಕಾರಿಗಳ, ಜಂಟಿ ನಿರ್ದೇಶಕರ ಆಪ್ತಶಾಖೆಗೆ, ಕೇಂದ್ರ ಕಛೇರಿ, ಬೆಂಗಳೂರು.
2. ಕಛೇರಿ ಪ್ರತಿ.

# ಸೂಕ್ತಿಗಳು.................

ಮೂರು ಅಥವಾ ನಾಲ್ಕು ವಾಕ್ಯಗಳಲ್ಲಿ ಮುಗಿದು ಹೋಗುವ ಸೂಕ್ತಿಗಳಿವು. ಒಂದರ್ಥದಲ್ಲಿ ಇವುಗಳನ್ನು ಮಾಡರ್ನ್ ಸುಭಾಷಿತಗಳು ಎನ್ನಬಹುದೇನೋ, ಇವೆಲ್ಲಾ ಫಾರ್ವರ್ಡ್ ಮೇಲ್‌ನ ರೂಪದಲ್ಲಿ ಬಂದಿರುವುದರಿಂದ ಇವುಗಳ ಮೂಲ ಲೇಖಕರು ಯಾರೆಂದು ಗೊತ್ತಿಲ್ಲ, ಸ್ವಾರಸ್ಯವೇನೆಂದರೆ, ಈ ಸೂಕ್ತಿಗಳಲ್ಲಿ ಬೆರಗಿದೆ, ಬೆಳಕಿದೆ. ಬುದ್ಧಿವಾದವಿದೆ. ಜೀವನ ದರ್ಶನವಿದೆ. ಮನುಷ್ಯ ಹೇಗೆ ಬದುಕಬೇಕು? ಯಾವ ಸಂದರ್ಭದಲ್ಲಿ ಹೇಗಿರಬೇಕು ಎಂಬುದರ ವಿಚಾರಣೆಯೂ ಇದೆ. ನಿಮಗಿಷ್ಟವಾಗಬಹುದು, ಓದಿಕೊಳ್ಳಿ....

➡ ಯಾರು ಎಷ್ಟೇ ಆಪ್ತರಾಗಿದ್ದರೂ ಸರಿ, ಅವರೊಂದಿಗೆ ಬದುಕಿನ ಎಲ್ಲಾ ರಹಸ್ಯಗಳನ್ನು ಹೇಳಿಕೊಳ್ಳಬೇಡಿ. ಕಾಲ ಒಂದೇ ರೀತಿ ಇರುವುದಿಲ್ಲ. ಇವತ್ತು ಪರಮಾಪ್ತರಾಗಿದ್ದವರೇ ಐದಾರು ವರ್ಷಗಳ ನಂತರ ವಿರೋಧಿಯಾಗಬಹುದು. ಅಂತಹ ಸಂದರ್ಭದಲ್ಲಿ ಹಿಂದೊಮ್ಮೆ ಅವರಿಗೆ ಹೇಳಿಕೊಂಡ ರಹಸ್ಯಗಳೇ ಈಗ ನಿಮ್ಮ ಮರ್ಯಾದೆ ಕಳೆಯಬಹುದು.

➡ ಸಮಸ್ಯೆಗಳು ಎದುರಾದಾಗ ಅದನ್ನು ಎಲ್ಲರ ಬಳಿಯೂ ಹೇಳಬೇಡಿ. ಕಾರಣ, ನಿಮ್ಮ ಸಮಸ್ಯೆಯ ಬಗ್ಗೆ ಗೊತ್ತಾದಾಗ–ಶೇಕಡಾ 20ರಷ್ಟು ಮಂದಿ ಆ ಬಗ್ಗೆ ತಲೆ ಕೆಡಿಸಿಕೊಳ್ಳದೆ ಇದ್ದು ಬಿಡುತ್ತಾರೆ. ಶೇಕಡಾ 70ರಷ್ಟು ಮಂದಿ ನಿಮಗೆ ಒದಗಿದ ಕಷ್ಟ ಕಂಡು ಒಳಗೊಳಗೇ ಖುಷಿ ಪಡುತ್ತಾರೆ! ಅಯ್ಯೋ ಪಾಪ ಎಂದು ಕನಿಕರಿಸಿ ನೆರವಿಗೆ ಬರುವವರ ಸಂಖ್ಯೆ ಶೇ. 10ಕ್ಕಿಂತ ಕಡಿಮೆ ಇದ್ದಿತು.

➡ ಯಾವುದೇ ಒಂದು ವಸ್ತು ತುಂಬ ಮಹತ್ವದ್ದು ಅನ್ನಿಸುವುದು ಎರಡು ಸಂದರ್ಭಗಳಲ್ಲಿ, 1) ಅದನ್ನು ಪಡೆದುಕೊಳ್ಳುವ ಮುಂಚೆ, 2) ಅದನ್ನು ಕಳೆದುಕೊಂಡ ನಂತರ!

➡ ಯಾವಾಗಲೂ ಒಳ್ಳೆಯದನ್ನೇ ಪ್ರಾರ್ಥಿಸಿ. ಒಳ್ಳೆಯದನ್ನೇ ಧ್ಯಾನಿಸಿ. ಎಲ್ಲರಿಗೂ ಒಳಿತನ್ನೇ ಬಯಸಿ. ಎದೆಯ ಅಂಗಳದಲ್ಲಿ ಹಚ್ಚ ಹಸಿರಿನ ತೋಟವನ್ನೇ ಸದಾ ಇಟ್ಟುಕೊಳ್ಳಿ. ಇಷ್ಟಿದ್ದರೆ ಸಾಕು: ಹಾಡುವ ಕೋಗಿಲೆಗಳು ತಾವಾಗಿಯೇ ಹಾರಿ ಬರುತ್ತವೆ.

➡ ಸಮಸ್ಯೆಗಳು ಬಂದಿರುವುದು ನಮಗಲ್ಲ ಎನ್ನುವ ಸಂದರ್ಭದಲ್ಲಿ ಮಾತ್ರ ಎಂಥ ಸಮಸ್ಯೆಗೂ ಪರಿಹಾರ ಸೂಚಿಸುವ ಉತ್ಸಾಹ ನಮಗಿರುತ್ತದೆ.

➡ ಖಾಲಿ ಜೇಬಿನೊಂದಿಗೆ ನಡೆಯುತ್ತಾ ಹೋದರೆ, ಎದುರಾಗುವ ಒಂದೊಂದು ತಿರುವೂ ಒಂದೊಂದು ಪಾಠ ಹೇಳಿಕೊಡುತ್ತದೆ. ಜೇಬು ತುಂಬಿಸಿಕೊಂಡು ಹೊರಟವರಿಗೆ ಎದುರಾಗುವ ಪ್ರತಿತಿರುವೂ ದಾರಿ ತಪ್ಪಿಸುತ್ತದೆ.

➡ ಸತ್ಯ ಹೇಳಲು ಯಾರೂ ಹೆದರುವುದಿಲ್ಲ ನಿಜ. ಆದರೆ ಸತ್ಯ ಹೇಳಿದ ನಂತರ ಉಂಟಾಗುವ ಪರಿಣಾಮಗಳನ್ನು ಎದುರಿಸಲು ಖಂಡಿತ ಹೆದರುತ್ತಾರೆ.

➡ ಸಂತೋಷ ಅಥವಾ ನೆಮ್ಮದಿ ಎಂಬುದು ಎಲ್ಲಿ ಸಿಗಬಹುದು ಎಂದು ಹುಡುಕಲು ಹೊರಟ ಕ್ಷಣದಿಂದಲೇ ನಮ್ಮ ಬದುಕಿನಲ್ಲಿ ಟೆನ್ಷನ್ ಎಂಬ ಮಾಯೆ ಪ್ರವೇಶಿಸಿ ಬಿಡುತ್ತದೆ.

➡ ನಮ್ಮ ಆಸೆ, ನಿರೀಕ್ಷೆ ಮತ್ತು ಕನಸುಗಳನ್ನು ತಲೆಗೂದಲು ಹಾಗು ಉಗುರಿಗೆ ಹೋಲಿಸಬಹುದೇನೋ, ಎಷ್ಟು ಬಾರಿ ಕತ್ತರಿಸಿದರೂ ಸರಿ; ಅವು ಬೆಳೆಯುತ್ತಲೇ ಇರುತ್ತವೆ.

➡ ಕೆಲವೊಂದು ಸಂದರ್ಭದಲ್ಲಿ ನಮ್ಮ ದುಃಖದ ಕ್ಷಣಗಳನ್ನು ನೆನಪಿಸಿಕೊಂಡು ನಗುತ್ತೇವೆ. ಮತ್ತೆ, ಕೆಲವೊಮ್ಮೆ ನಮ್ಮ ಬದುಕಲ್ಲಿ ಸುಖವಾಗಿದ್ದ ಸಂದರ್ಭ ನೆನಪಿಸಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತೇವೆ. ಇದೇ ಜೀವ-ಇದೇ ಜೀವನ.

ಆಧಾರ : ಕನ್ನಡ ಪ್ರಭ ದಿನಪತ್ರಿಕೆ

---

# ವಿಶ್ವಕೆ ನೀಡುವ ಹೊಸ ಹೆಸರನ್ನು

ಸ್ನೇಹಕೆ ನಾವು ಕಂಕಣ ಕಟ್ಟಿ !
ಭ್ರಾತೃತ್ವವ ನಾವು ಉಳಿಸುವ ಕೂಡಿ
ಉಳಿಸುವ ಕೂಡಿ ॥ಪ॥
ನೀವೂ ಬನ್ನೀ ನಮ್ಮನು ಕೂಡಿ
ವಿಶ್ವಕೆ ನೀಡುವ ಹೊಸ ಹೆಸರನ್ನು ॥ಅ.ಪ॥

ಬೇಡನ್ ಪೊವೆಲರ ! ದೂರದೃಷ್ಟಿ !
ಸೇವಾ ಭಾವಕೆ ಆಯಾಮ ಸೃಷ್ಟಿ !
ಬೇಡನ್ ಪೊವೆಲರ ! ದೂರದೃಷ್ಟಿ !
ಸೇವಾ ಭಾವಕೆ ಆಯಾಮ ಸೃಷ್ಟಿ !
ಸ್ಕೌಟಿಂಗ್ ಜೀವನ ಶೈಲಿಯ ಸೃಷ್ಟೀ !
ವಿಶ್ವ ಕುಟುಂಬದ ಆಧಾರ ಸೃಷ್ಟಿ !
ನೀವೂ ಬನ್ನೀ ನಮ್ಮನು ಕೂಡಿ
ವಿಶ್ವಕೆ ನೀಡುವ ಹೊಸ ಹೆಸರನ್ನು ॥೧॥

"ಸದಾಸಿದ್ಧ" ಎನ್ನುವ ಧ್ಯೇಯ !
ಸ್ಕೌಟ್ಗೂ ಗೈಡ್‌ಗಳ ಪ್ರಿಯವಾದ ಪೇಯ !
"ಸದಾಸಿದ್ಧ" ಎನ್ನುವ ಧ್ಯೇಯ !
ಸ್ಕೌಟ್ಗೂ ಗೈಡ್‌ಗಳ ಪ್ರಿಯವಾದ ಪೇಯ !
ಜಾತಿ ಭೇದವ ಅರಿಯೆವು ನಾವು !
ಮಾನವ ಜಾತಿ ಒಂದೇ ಎಂಬೆವು ನಾವು !
ಮಾನವ ಜಾತಿ ಒಂದೇ ಎಂಬೆವು ನಾವು !
ನೀವೂ ಬನ್ನೀ ನಮ್ಮನು ಕೂಡಿ
ವಿಶ್ವಕೆ ನೀಡುವ ಹೊಸ ಹೆಸರನ್ನು ॥೨॥

ರಚನೆ : ಎಂ. ಬದರಿನಾಥ,
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




*"We have got to make this world a better and happier place and each of you can do that. Your Law and Promise is to help other people at all times. The world needs you"*

**- Olave Lady Baden Powell**




**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ.)
ಮೂಲಕ ಕಳುಹಿಸಬಹುದು

सत्यमेव जयते
MNRE
Government of India

Government of Karnataka

ENERGY IS LIFE
BEE
CONSERVE IT
Ministry of Power
Government of India

# ಮಿತ- ಹಿತ

## "ವಿದ್ಯುತ್ ಬಳಕೆ ಮಿತ, ರಾಜ್ಯಕ್ಕೆ ಹಿತ"

### ಇಲ್ಲಿಯ ತನಕ

- ಇನ್‌ಕ್ಯಾಂಡಿಸೆಂಟ್/ಫ್ಲೋರೋಸೆಂಟ್ ಲ್ಯಾಂಪುಗಳು ಉರಿಯುತ್ತಿತ್ತು
- ಆಡಂಬರದ ವಿದ್ಯುತ್ ದುಂದುವೆಚ್ಚದ ಸೂಚಕ
- ಬಿಸಿನೀರಿಗೆ ಎಲೆಕ್ಟ್ರಿಕ್ ಗೀಸರ್ ಅಥವಾ ಬಾಯ್ಲರ್



### ಇಂದಿನಿಂದ

- ಸಿ.ಎಫ್.ಎಲ್/ಎಲ್.ಇ.ಡಿ ಲ್ಯಾಂಪ್‌ಗಳೇ ಬೇಕು
- ಬೆಳಕು ಎಷ್ಟು ಬೇಕೋ, ಅಷ್ಟೇ ಸಾಕು
- ಸೌರಶಕ್ತಿಯ ಸೋಲಾರ್ ಹೀಟರ್




- ಒಂದು ಪಟ್ಟು ವಿದ್ಯುತ್ ಉಳಿತಾಯ ಎರಡು ಪಟ್ಟು ಉತ್ಪಾದನೆಗೆ ಸಮ.
- ಸೌರಶಕ್ತಿ ಬಳಸಿ ವಿದ್ಯುತ್ ಬಿಲ್ಲಿನಲ್ಲಿ ರಿಯಾಯತಿ ಪಡೆಯಿರಿ.
- ಪ್ರತಿಯೊಬ್ಬ ಪ್ರಜೆಯ ಸಹಕಾರ ಇಡೀ ರಾಜ್ಯಕ್ಕೆ ಪುರಸ್ಕಾರ
- ವಿದ್ಯುತ್ ಅಮೂಲ್ಯ. ಪ್ರಮಾಣೀಕತೆಯಿಂದ ಉಪಯೋಗಿಸಿ
- "ಇಂದಿನ ಮಕ್ಕಳೇ ಮುಂದಿನ ಜನಾಂಗ". ಅನಾವಶ್ಯಕವಾಗಿ ಉರಿಯುವ ವಿದ್ಯುತ್ ದೀಪ ಮತ್ತು ಫ್ಯಾನ್‌ಗಳನ್ನು ಸ್ವಿಚ್ ಆಫ್ ಮಾಡಲು ಮನೆಯ ಮಕ್ಕಳಿಗೆ ತಿಳಿ ಹೇಳಿ.
- ಸೌರಶಕ್ತಿ ಮಹಾಶಕ್ತಿ, ಅದರ ಬಳಕೆ ನಮ್ಮೆಲ್ಲರ ಗಳಿಕೆ.











KARNATAKA RENEWABLE ENERGY DEVELOPMENT LIMITED
(A Government of Karnataka Enterprises)

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28, 30 Every Month (No. of Pages : 4 + 28 = 32)







ದಿನಾಂಕ 24.02.2013 ರಂದು ಮಂಗಳೂರಿನಲ್ಲಿ ಜರುಗಿದ ಪಲ್ಸ್ ಪೋಲಿಯೋ ಕಾರ್ಯಕ್ರಮದ ಪ್ರಚಾರದಲ್ಲಿ ತೊಡಗಿರುವ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಇದೇ ಸಂದರ್ಭದಲ್ಲಿ "ಸ್ವಚ್ಛತಾ ಕಾರ್ಯಕ್ರಮ"ದಲ್ಲಿ ಭಾಗವಹಿಸಿದ ಗೈಡ್ಸ್ ಮತ್ತು ರೇಂಜರ್ಸ್‌ಗಳನ್ನು ಕಾಣಬಹುದು.



21ನೇ ಫೆಬ್ರವರಿ 2013 ರಂದು ಹಾಸನ ಜಿಲ್ಲೆ ಅರಸೀಕೆಯಲ್ಲಿ ಜರುಗಿದ ಸಮುದಾಯ ಸೇವಾ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್‌ಗಳು



22 ರಿಂದ 24 ಫೆಬ್ರವರಿ 2013ರವರೆಗೆ ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ಮಟ್ಟದ ಕಬ್ಸ್-ಬುಲಬುಲ್ಸ್, ಸ್ಕೌಟ್ಸ್-ಗೈಡ್ಸ್ ಮೇಳದಲ್ಲಿ ಜರುಗಿದ ಶಿಭಿರಾಗ್ನಿ ಕಾರ್ಯಕ್ರಮದ ದೃ

SCOUTS
Creating a Better World

If not delivered, please return to :

THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**